# ದೃಶ್ಯಕಲಾ ವಿಮರ್ಶೆ

1998-1999



ಕರ್ನಾಟಕ ಲಲಿತಕಲಾ ಅಕಾಡೆಮಿ

Karnataka Lalithakala Academy

# ದೃಶ್ಯಕಲಾ ವಿಮರ್ಶೆ

## 1998-1999




- ಕರ್ನಾಟಕ ಲಲಿತಕಲಾ ಅಕಾಡೆಮಿ

**Karnataka Lalithakala Academy**

೨ನೇ ಮಹಡಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು - ೫೬೦ ೦೦೨

IInd Floor, Kannada Bhavana, J.C. Road, Bangalore - 560 002

DRUSHYAKALA VIMARSHE : A collection of critical Articles, Published by H. Shankarappa, Registrar, Karnataka Lalithakala Academy, Bangalore

Pages : VIII + 68

First Impression : 2000

Price : Rs. 35/-

© ಹಕ್ಕುಗಳನ್ನು ಕಾದಿರಿಸಲಾಗಿದೆ

ಪ್ರಧಾನ ಸಂಪಾದಕರು
**ಪ್ರೊ || ಅಂದಾನಿ ವಿ.ಜಿ.**

ಪ್ರಕಟಣಾ ಸಮಿತಿ
**ಶ್ರೀ ಎಸ್.ಎಂ. ಜಂಬುಕೇಶ್ವರ**
**ಶ್ರೀ ಬಸವರಾಜ ಗವಿಮಠ**
**ಶ್ರೀ ಟಿ. ದೇವೇಂದ್ರ**
**ಶ್ರೀ ಈರಣ್ಣ ದಂಡಿನ**
**ಶ್ರೀ ಬಿ.ಆರ್. ಕೊರ್ತಿ**

ಪ್ರಕಾಶಕರು
**ಶ್ರೀ ಎಚ್. ಶಂಕರಪ್ಪ**

ಮುಖಪುಟ ಚಿತ್ರ
**ಎ. ಅಲಮೇಲಕರ್**

*Printed at :*
**Rashmi Mudrana**
Sudhamanagar
Bangalore - 27
Phone : 2243550

# ಮುನ್ನುಡಿ

ಈ ಪುಸ್ತಕವೊಂದು ಅಪರೂಪದ ಪ್ರಯೋಗ.

ಕರ್ನಾಟಕದ ನಿಯತಕಾಲಿಕೆಯ ಪತ್ರಿಕೆಗಳಲ್ಲಿ ಪ್ರಕಟವಾಗುವ ಕಲಾವಿಮರ್ಶೆಯ ಬರಹಗಳು ಮೊದಲಿಗೆ ಇಲ್ಲಸ್ಟ್ರೇಷನ್‌ಗಳ ಹಾಗೆ ಎನಿಸಿಬಿಡುತ್ತವೆ. ಪತ್ರಿಕಾ ವಿಮರ್ಶೆ ಎಂದರೆ ''ಇಂದು ಸೃಷ್ಟಿಗೊಂಡು ನಾಳೆ ಮರೆತುಹೋಗಿ ಬಿಡಬಹುದಂತಹವು, ಮಾಯವಾಗಿ ಬಿಡುವಂತಹವು. 'ಅಕಾಲಮೃತ್ಯು'ವೇ ಇದರ ಮೂಲಭೂತ ಗುಣಲಕ್ಷಣ'', ಎಂದು ಕೆಲವರು ನಂಬಿಕೊಂಡಿದ್ದಾರೆ.

ಆದರೆ 20ನೇ ಶತಮಾನದ ಕರ್ನಾಟಕದ ಕಲಾಸಾಹಿತ್ಯ/ ವಿಮರ್ಶೆಯ ಸಂದರ್ಭವು ಹಾಗಲ್ಲ. ಕರ್ನಾಟಕದ ಆಧುನಿಕ ಹಾಗೂ ಸಮಕಾಲೀನ ಕಲೆಯ ಬಗ್ಗೆ ನಮಗೆ ಇಂದು ಲಭ್ಯವಿರುವ ಗುಣಾತ್ಮಕ ವಿಮರ್ಶೆಯು ನಿಯತಕಾಲಿಕೆಗಳಲ್ಲಿಯೇ ಹೆಚ್ಚಾಗಿ ಕಂಡುಬರುತ್ತವೆ. ಕಲೆಯನ್ನು ಕುರಿತು ಪ್ರಕಟವಾಗಿರುವ ಪುಸ್ತಕಗಳಿಗಿಂತಲೂ ನಿಯತಕಾಲಿಕೆಯ ಪ್ರಕಟಣೆಗಳ ಕಲಾವಿಮರ್ಶೆ, ಲೇಖನ ಮತ್ತು ಸಾಹಿತ್ಯದ ಸಂಖ್ಯೆ, ಗುಣಮಟ್ಟ ಮತ್ತು ಓದುವಿಕೆಯ ದೃಷ್ಟಿಯಿಂದ ಶ್ರೇಷ್ಟ ಹಾಗೂ ಜನಪ್ರಿಯವಾಗಿರುವಂತಹುದು.

ಇದೊಂದು ಅಪರೂಪದ ಪ್ರಯೋಗವೆಂದೆ ಕರ್ನಾಟಕದ ಕಲೆ, ಕಲಾಕೃತಿ, ಕಲಾವಿದರ ಬಗ್ಗೆ ೧೯೯೮ ಮತ್ತು ೧೯೯೯ರಲ್ಲಿ ಇಂಗ್ಲೀಷ್ ಹಾಗೂ ಕನ್ನಡದಲ್ಲಿ ಪ್ರಕಟಗೊಂಡಿರುವ ಆಯ್ದ ಕಲಾವಿಮರ್ಶೆಗಳ ಸಂಗ್ರಹ ಈ ಪುಸ್ತಕ. ಇನ್ನು ಮುಂದೆ ಕರ್ನಾಟಕ ಲಲಿತಕಲಾ ಅಕಾಡೆಮಿಯು ಇದೇ ರೀತಿ ಪ್ರತಿವರ್ಷವೂ ಕಲಾಸಾಹಿತಿಗಳ ಆಯ್ದ ಪ್ರಮುಖ ವಿಮರ್ಶೆಗಳನ್ನು ಪ್ರಕಟಿಸುವ ಯೋಜನೆಯನ್ನು ಹೊಂದಿದೆ. ಈ ಸಂಗ್ರಹ ಅದಕ್ಕೆ ನಾಂದಿ.

ಈ ಸಂಗ್ರಹದಲ್ಲಿ ಇಂಗ್ಲೀಷ್ ಹಾಗೂ ಕನ್ನಡ - ಎರಡೂ ಭಾಷೆಯ ಆಯ್ದ ಬರಹಗಳಿವೆ. ಈಗಾಗಲೇ ಪ್ರಸಿದ್ಧರಾಗಿರುವ ವಿಮರ್ಶಕರೊಂದಿಗೆ, ಯುವ ಹಾಗೂ ಜನಪ್ರಿಯರಲ್ಲದ ಬರಹಗಾರರ ವಿಮರ್ಶೆ ಹಾಗೂ ಲೇಖನಗಳೂ ಇಲ್ಲಿವೆ. ಅಂದರೆ ಕರ್ನಾಟಕದಾದ್ಯಂತ ಇಂದು ಚಾಲ್ತಿಯಲ್ಲಿರುವ ಬರಹಗಳ ನಾಲ್ಕಾರು ಮಾದರಿಗಳು ಸಾಧ್ಯವಿದ್ದು, 'ವಿಮರ್ಶೆ ಎಂದರೆ ಹೀಗೆಯೇ' ಎಂಬ ಒಂದು ಖಂಡಿತವಾದ ಕ್ರಮ ಇಲ್ಲವಾಗಿದೆ. ಇದೊಂದು ಒಳ್ಳೆಯ ಲಕ್ಷಣ.

'ಕರ್ನಾಟಕದಲ್ಲಿ ಕಲೆ ಹಾಗೂ ಅದರ ವಿಮರ್ಶೆ ಎಂಬುದು ಬೆಂಗಳೂರು ಕೇಂದ್ರಿತ' ಎಂಬ ಆರೋಪವೊಂದಿದೆ. ಈ ಪುಸ್ತಕದಲ್ಲಿನ ವಿಮರ್ಶೆಗಳ ಸಂಕಲನದ 'ಸ್ವರೂಪವು' ಈ ಆರೋಪವನ್ನು

ಮನಸ್ಸಿನಲ್ಲಿರಿಸಿಕೊಂಡಿದೆ. ಆದ್ದರಿಂದಲೇ ಬೆಂಗಳೂರಿನಲ್ಲಿ ನೆಲೆಸಿರುವ ಪ್ರಮುಖ ಇಂಗ್ಲೀಷ್ ಮತ್ತು ಕನ್ನಡ ವಿಮರ್ಶಕರ ವಿಮರ್ಶೆಗಳೊಂದಿಗೆ, ರಾಜ್ಯದ ಇತರೆ ಪ್ರಾಂತ್ಯಗಳಲ್ಲಿಯೂ ನೆಲೆ ನಿಂತಿರುವ ಬರಹಗಾರರ ವಿಮರ್ಶೆಗಳನ್ನೂ ಪ್ರಕಟಿಸಲಾಗಿದೆ. ತನ್ಮೂಲಕ ಕಲೆಯ ಕೇಂದ್ರವೆಂದು ಭಾವಿಸಲಾಗುವ ಭೌಗೋಳಿಕ ಪ್ರದೇಶವೊಂದರಿಂದ ದೂರ ಸರಿದಂತೆ ವಿಮರ್ಶೆಯ ಪರಿಕರ, ಚಿಂತನಾದೃಷ್ಟಿ, ದೃಶ್ಯಕಲೆಯನ್ನು ಅರ್ಥೈಸುವ ಹರವು - ಎಲ್ಲವೂ ಹೇಗೆ ಭಿನ್ನಗೊಳ್ಳುತ್ತದೆಂಬುದನ್ನು ಕಂಡುಕೊಂಡಂತಾಗುತ್ತದೆ. ಮುಖ್ಯವಾಹಿನಿ ಕಲೆಯು ಹುಟ್ಟಿಕೊಳ್ಳಲು ನೆರವಾದ ವಿಮರ್ಶೆಯ ಪರಿಕರಕ್ಕೆ ಇದೊಂದು ಬಗೆಯ ಪ್ರತಿರೋಧವೂ ಹೌದು, ಸವಾಲೂ ಹೌದು. ಈ ರೀತಿಯ ಹೋಲಿಕೆಯ ರೀತಿಯ ಸಂಗ್ರಹದಿಂದ ನಮಗಾಗುವ ಲಾಭವೆಂದರೆ ಅದು ಕಲಾರಂಗದಲ್ಲಿ ಎಲ್ಲರ ಸಹಭಾಗಿತ್ವವನ್ನು ಸಾಧ್ಯವಾಗಿಸುವ ಪ್ರಜಾಪ್ರಭುತ್ವವಾಗಿ ನಿಲುವಿನ ಪ್ರತಿಷ್ಠಾಪನೆ.

★★★

ಈ ಪುಸ್ತಕವು ಕನ್ನಡ ಮತ್ತು ಇಂಗ್ಲೀಷ್ ವಿಮರ್ಶೆಗಳ ದ್ವಿಭಾಷಾ ಸಂಗ್ರಹ. ಪಾಶ್ಚಾತ್ಯ ಮೂಲದಿಂದ ರೂಪುಗೊಂಡ ಇಂಗ್ಲೀಷ್ ವಿಮರ್ಶೆಯೊಂದಿಗೆ ಕನ್ನಡ ಸಾಹಿತ್ಯದ ಮೂಲಕ ಜನಿತವಾದ ಕನ್ನಡ ದೃಶ್ಯವಿಮರ್ಶೆಯೂ ಒಂದು ಅಪರೂಪದ ಜುಗಲ್‌ಬಂದಿಯನ್ನು ಹುಟ್ಟುಹಾಕುತ್ತದೆ. ಆಶ್ಚರ್ಯದ ವಿಷಯವೆಂದರೆ, ಕನ್ನಡ ಸಂಸ್ಕೃತಿಗೆ, ಅದರ ಕುರಿತಾದ ಚಿಂತನೆಗೆ ನಮ್ಮ ಅಕ್ಕಪಕ್ಕದ ಭೌಗೋಳಿಕ ಪ್ರಾಂತ್ಯಗಳ ಭಾಷೆಗಳ, ಸಂಸ್ಕೃತಿಗಳ ಸಾಹಚರ್ಯ ದೊರಕಿದಂತೆ ದೃಶ್ಯವಿಮರ್ಶೆಗೆ ದಕ್ಕದೇ ಇರುವುದು. ಆದ್ದರಿಂದಲೇ ಕರ್ನಾಟಕದ ದೃಶ್ಯಕಲೆಯನ್ನು ಕುರಿತ ವಿಮರ್ಶೆಗಳು ಇಂಗ್ಲೀಷ್ ಮತ್ತು ಕನ್ನಡದಲ್ಲಿ ಮಾತ್ರ ಕಂಡುಬರುತ್ತವೆ. ಇತರ ಭಾರತೀಯ ಭಾಷೆಗಳಲ್ಲಿ ಇವು ಇಲ್ಲವೇ ಇಲ್ಲವೆನಿಸುವಷ್ಟು ಅಪರೂಪ.

★★★

ಕಲಾವಿಮರ್ಶಕರನ್ನು ತಮಗೆ ಅತ್ಯುತ್ತಮವಾಗಿ ಕಂಡ ತಮ್ಮ ಎರಡೆರಡು ವಿಮರ್ಶೆಗಳನ್ನು (1998-99ರ ಸಾಲಿನ) ಕಳಿಸಿಕೊಡುವಂತೆ ಲಲಿತಕಲಾ ಅಕಾಡೆಮಿಯ ವತಿಯಿಂದ ವಿನಂತಿಸಿಕೊಂಡಿದ್ದೆವು. ಅದಕ್ಕೆ ಎಲ್ಲರೂ ಕೂಡಲೆ ಪ್ರತಿಕ್ರಿಯಿಸಿದರು. ಈ ವಿಮರ್ಶೆಗಳು ನಮಗೆ ಹಲವು ಐತಿಹಾಸಿಕ ಪಾಠಗಳನ್ನು ಹೇಳಿಕೊಡುತ್ತವೆ. 20ನೇ ಶತಮಾನದ ಅಂತಿಮ ವರ್ಷಗಳಲ್ಲಿ ಮೂಡಿಬಂದ ಈ ವಿಮರ್ಶೆಗಳು ಒಬ್ಬೊಬ್ಬ ಕಲಾವಿದರನ್ನು ಕುರಿತದ್ದು ಅಥವ ಒಂದು ಕಲಾಶಿಬಿರವನ್ನು ಕುರಿತದ್ದು. ಇವುಗಳ ನಡುವಿನ ಇಬ್ಬರು ಅಥವ ಮೂವರು ಕಲಾವಿದರ ಪ್ರದರ್ಶನಗಳ ವಿಮರ್ಶೆಗಳು ತೀರ ಅಪರೂಪ. ಅಂದರೆ ಸ್ವತಃ ವಿಮರ್ಶಕರೇ ಅಂತಹ ಪ್ರದರ್ಶನಗಳ ಬಗ್ಗೆ ಬರೆದಿರುವಾಗಲೂ ಅವುಗಳನ್ನು ಈ ಪುಸ್ತಕದ ರೂಪದಲ್ಲಿ ಪುನರ್‌ಪ್ರಕಟಿಸುವುದನ್ನು ಇಚ್ಛಿಸುವುದಿಲ್ಲ. ಕಲಾ ಪ್ರದರ್ಶನಗಳ ಸ್ವರೂಪವೇ ಬದಲಾಗುತ್ತಿರುವುದು ಇದಕ್ಕೆ ಕಾರಣವಿರಬಹುದು. ಏಕವ್ಯಕ್ತಿ ಪ್ರದರ್ಶನಗಳನ್ನು ಏರ್ಪಡಿಸಿದರೆ ಒಬ್ಬ ಕಲಾವಿದರನ್ನು ಕುರಿತಾದ ಬರಹವೂ ದೀರ್ಘವಾಗಿ, ಆಳವಾಗಿ ಇರಬಹುದು ಎಂಬ ಭಾವನೆಯು ಇಂದು ಸಾಂದ್ರಗೊಳ್ಳುತ್ತಿದೆ.

ವಿಮರ್ಶೆಯಿಂದ ಪ್ರದರ್ಶನ ಹಾಗೂ ಕಲಾತ್ಮಕ ಸೃಷ್ಟಿಯಿಂದ ವಿಮರ್ಶೆ ಪರಸ್ಪರ ಪ್ರಭಾವಗೊಂಡು ರೂಪಾಂತರ ಹೊಂದುವುದಕ್ಕೆ ಈ ಮೇಲಿನ ಉದಾಹರಣೆಯು ಒಂದು ಸ್ಯಾಂಪಲ್ ಅಷ್ಟೇ.

★★★

ಒಬ್ಬ ಕಲಾವಿದನ ಕುರಿತು ಒಂದಕ್ಕಿಂತ ಹೆಚ್ಚು ವಿಮರ್ಶೆ ಈ ಪುಸ್ತಕದಲ್ಲಿ ಸೇರಿ ಬರದಂತೆ ಎಚ್ಚರವಹಿಸಲಾಗಿದೆ ಮತ್ತು ವಿಮರ್ಶೆಗಳಿಗೆ ಪೂರಕವಾಗುವಂತೆ ಕೆಲವು ಕಲಾಕೃತಿಗಳ ಕಪ್ಪು-ಬಿಳುಪು ಚಿತ್ರಗಳನ್ನೂ ಮುದ್ರಿಸಲಾಗಿದೆ. ಮುಖ್ಯವಾಗಿ ಓದುಗರು ಗಮನಿಸಬೇಕಾದುದೇನೆಂದರೆ ಒಂದು ಕಲಾಕೃತಿಯ ಬಗ್ಗೆ ಓದುವುದಾಗಲಿ ಆ ಕೃತಿಯ ಕಪ್ಪು-ಬಿಳುಪು (ಅಥವ ವರ್ಣ) ಚಿತ್ರವನ್ನು ನೋಡುವುದಾಗಲಿ - ಎರಡೂ ಸಹ ನಮಗೆ ಸೂಕ್ತವಾದಂತೆ ಆ ಕೃತಿ (ಸರಣಿ) ಯನ್ನು ನಮ್ಮ ಮನಸ್ಸಿನಲ್ಲಿ ಅಚ್ಚು ಹಾಕಿಕೊಳ್ಳಲು ನಮ್ಮ ಸಾಂಸ್ಕೃತಿಕ ಸಂದರ್ಭವು ನಮಗೆ ಕೊಟ್ಟಿರುವ ಸೌಲಭ್ಯ. ಇದು ಹಲವು ದಶಕಗಳ ಕಾಲ, ಇಂದಿನ ಕಲಾಪರಿಸರದ ದಾಖಲಾತಿಯಾಗಿಯೂ ಉಳಿದುಕೊಳ್ಳುತ್ತದೆ. ಇದಕ್ಕಿಂತಲೂ ಭಿನ್ನವಾಗಿ ನಾವು ಕಲೆಯನ್ನು ಅರ್ಥೈಸುವ ಕ್ರಮವೊಂದಿದೆ. ಕಲೆಯ ಬಗ್ಗೆ ಚರ್ಚಿಸುವುದು, ಕಲಾಶಾಲೆಗಳಲ್ಲಿ ಬೋಧಿಸುವುದು ಇತ್ಯಾದಿ, 'ವಾಚ್ಯ ಹಾಗೂ ಮೌಖಿಕ ಪರಂಪರೆ' ಎಂದು ನಾವು ಏನನ್ನು ಭಾವಿಸುತ್ತೇವೆಯೋ ಅದೂ ಸಹ ಈ ಲಿಖಿತ ದಾಖಲೆಗಳಿಂದ ಪ್ರಭಾವಿತವಾಗಿವೆ ಹಾಗೂ ಅದೇ ಕಾಲಕ್ಕೆ ಲಿಖಿತ ವಿಶ್ಲೇಷಣೆಗಳನ್ನು ಪ್ರಭಾವಿಸಿದ್ದಿದೆ. ಏಕೆಂದರೆ ಇಲ್ಲಿನ ಬಹುಪಾಲು ಕಲಾವಿಮರ್ಶಕರೂ ಸಹ ಹಿಂದೊಮ್ಮೆ ಈ ಕಲಾಶಾಲೆಗಳ ವಿದ್ಯಾರ್ಥಿಗಳಾಗಿದ್ದವರೇ ಮತ್ತು ಕ್ಯಾಟಲಾಗ್ ಬರಹಗಳು, ಟಿ.ವಿ., ರೇಡಿಯೋ ಸಂದರ್ಶನಗಳ ಮೂಲಕ ಇಂದಿನ ಕಲಾಶಾಲೆಯ ವಿದ್ಯಾರ್ಥಿಗಳಿಗೆ ಚಿರಪರಿಚಿತರಾದವರೂ ಸಹ!

ಈ ಸಂಗ್ರಹದ ನಮ್ಮ ಕಪ್ಪು-ಬಿಳುಪಿನ ಪ್ರಯತ್ನದ ಹಿಂದೆಯೂ ಇಂತಹ ಅನೇಕ ಅಧ್ಯಯನ ಯೋಗ್ಯವಾದ ಅಂಶಗಳು ಅಡಕವಾಗಿರುವುದನ್ನು ಓದುಗರು ಗಮನಕ್ಕೆ ತೆಗೆದುಕೊಂಡರೆ ಈ ವಿಮರ್ಶಾ ಸಂಗ್ರಹದ ಸಂಪ್ರದಾಯವು ಒಳ್ಳೆಯ ಬುನಾದಿಯೊಂದನ್ನು ಹಾಕಿದಂತಾಗುತ್ತದೆ.

★★★

ಇಲ್ಲಿಯವರೆಗೂ ಆಧುನಿಕ ಹಾಗೂ ಸಮಕಾಲೀನ ಕರ್ನಾಟಕದ ಕಲೆಯನ್ನು ಕುರಿತು ಗುಣಾತ್ಮಕವಾಗಿ ಅತ್ಯುತ್ತಮವಾದ ವಿಮರ್ಶೆಗಳು ಬಂದಿರುವುದು ನಿಯತಕಾಲಿಕೆಗಳಲ್ಲಿಯೇ ಎಂದು ಈ ಮುಂಚೆ ಹೇಳಿದೆ. ಅಪರೂಪಕ್ಕೊಮ್ಮೆ ಅಲ್ಲೊಂದು ಇಲ್ಲೊಂದು ಪುಸ್ತಕವು ಈ ಕೆಲಸ ನಿರ್ವಹಿಸಿದ್ದಿದೆ. ಕನ್ನಡ ಸಾಹಿತ್ಯವನ್ನು ಕುರಿತು ಅನೇಕ ಪತ್ರಿಕಾ ವಿಮರ್ಶೆಗಳ ಸಂಗ್ರಹ ಪ್ರಕಟಗೊಂಡಿದ್ದರೂ ಸಹ ದೃಶ್ಯಕಲಾ ವಿಮರ್ಶೆಗಳ ಸಂಗ್ರಹವು ಅತಿ ವಿರಳ. ಇದು ವಿಮರ್ಶಕರಿಗೆ ತಮ್ಮ ವಾರದ ನಿಯತಕಾಲಿಕ ವಿಮರ್ಶೆಗಳ ಬಗ್ಗೆ ಇರುವ ಅನುಮಾನವನ್ನು ಪುಷ್ಟೀಕರಿಸುತ್ತದೆಯೇ ? ಇದೊಂದು ಭೌತಿಕವಾಗಿ ಸಾಕ್ಷಿ ದೊರಕಿಸಿಕೊಡದ ಪ್ರಶ್ನೆ. ಸರಳವಾಗಿ ಹೇಳುವುದಾದರೆ, ದೃಶ್ಯ ಕಲಾವಿಮರ್ಶಕರ್‍ಯಾರೂ ತಮ್ಮ ವಿಮರ್ಶೆಗಳನ್ನು ಸಂಗ್ರಹಿಸಿ ಪ್ರಕಟಿಸುವ ಸಂಪ್ರದಾಯವನ್ನು ರೂಢಿಸಿಕೊಂಡಿಲ್ಲದಿರುವುದೂ ಅಕಾಡೆಮಿಯ ವಲಯದ ಹೊರಗೆ - ಅದೂ ಕನ್ನಡದ ಒಟ್ಟಾರೆ ಶ್ರೀಮಂತ ಸಾಹಿತ್ಯಕ ಹಿನ್ನಲೆಯಲ್ಲಿ - ಏನನ್ನು ಸೂಚಿಸುತ್ತದೆ ?

ಆದ್ದರಿಂದ 'ನಿಯತಕಾಲಿಕೆಗಳಿಗಿಂತಲೂ ಪುಸ್ತಕ ರೂಪದಲ್ಲಿ ಪ್ರಕಟವಾಗುವ ಅದೇ ವಿಮರ್ಶೆಯ ಮೌಲ್ಯ ಉನ್ನತವಾದುದು' ಎಂಬ ಜನಜನಿತ ನಂಬಿಕೆಯನ್ನು ಆಧರಿಸಿದೆ ಈ ಪುಸ್ತಕ ರೂಪದ ನಿಯತಕಾಲಿಕ

ವಿಮರ್ಶೆಗಳ ಸಂಗ್ರಹ. ಕಲೆಯನ್ನು ಜನಪ್ರಿಯಗೊಳಿಸಲು ಕಲಾಕೃತಿಗಳನ್ನು ವೀಕ್ಷಿಸುವ ಅವಶ್ಯಕತೆಯಷ್ಟೇ ತುರ್ತಿನದು ಅವುಗಳ ಕುರಿತ ಮೌಲಿಕ, ಲಿಖಿತ ಚರ್ಚೆಗಳ ಸಂಗ್ರಹಗಳ ಮನನ ಹಾಗೂ ಅಧ್ಯಯನ. ಕಲೆಯನ್ನು ಕುರಿತು ಚರ್ಚೆ ನಡೆಯುವುದು ಹಾಗೂ ಅದನ್ನು ದಾಖಲಿಸುವದು ಕಾಲಕಾಲಕ್ಕೆ ಮಹತ್ವತೆಯನ್ನು ತಂದುಕೊಡುತ್ತದೆ.

ಈ ಪುಸ್ತಕ ಹೊರತರಲು ಆರಿಸಲಾಗಿರುವ ಬರಹಗಾರರು ಕಲಾವಿಮರ್ಶೆಗಳ ಬಗ್ಗೆ ಅರಿತವರಾಗಿದ್ದು, ಇಲ್ಲಿಯವರೆಗೆ ಕಲಾಕ್ಷೇತ್ರದಲ್ಲಿ ಗುರುತಿಸಿಕೊಂಡ ವ್ಯಕ್ತಿಗಳಾಗಿದ್ದು - ಅವರ ವಿಚಾರ ಆಲೋಚನೆಗಳ ವ್ಯಾಪ್ತಿಯನ್ನು ಅರಿಯಲು ಸಹಾಯವಾಗುವುದರಲ್ಲಿ ಸಂದೇಹವಿಲ್ಲ.

ಕಲಾವಿದರು, ಕಲಾರಸಿಕರು ಮತ್ತು ಸಾಹಿತ್ಯಭಿಮಾನಿಗಳು ಅಕಾಡೆಮಿಯ ಈ ಸಾಧನೆಗೆ ಸ್ವಾಗತಿಸಿವಿರೆಂದು ಆಶಿಸುತ್ತೇನೆ.

**ಪ್ರೊ॥ ವಿ.ಜಿ. ಅಂದಾನಿ**

# ಪರಿವಿಡಿ

# ಹೆಬ್ಬಾರರ ನೆನಪಲ್ಲಿ ಅರಳಿದ ಆಶಯಗಳು

ಪ್ರಸಿದ್ಧ ಕಲಾವಿದ ಕೆ.ಕೆ. ಹೆಬ್ಬಾರ್ ಅವರ ಹೆಸರಿನಲ್ಲಿ ಸ್ಥಾಪಿಸಲಾಗಿರುವ ಕೆ.ಕೆ. ಹೆಬ್ಬಾರ್ ಕಲಾ ಪ್ರತಿಷ್ಠಾನವು (ಮುಂಬೈ) ಸಮಕಾಲೀನ ಚಿತ್ರಕಲೆಯ ಸಂದರ್ಭದಲ್ಲಿ ನಿಷ್ಠೆ, ಕಾಳಜಿ ವಹಿಸುತ್ತ ಹಲವು ಮಹತ್ವದ ಹೆಜ್ಜೆಗಳನ್ನಿಡುತ್ತ ಬಂದಿದೆ. ಕಲಾ ಪ್ರತಿಭೆಗಳಿಗೆ ಪ್ರೋತ್ಸಾಹ ನೀಡುವ ಸ್ಕಾಲರ್‌ಶಿಪ್, ಕಲೆಯ ಮೂಲತತ್ವ ಕಂಡು ಅಂಥ ಕಲಾವಿದರಿಗೆ ವೇದಿಕೆ ಕಲ್ಪಿಸುವುದು, ಕಲಾವಿದರನ್ನು ಗುರುತಿಸುವುದು, ಪ್ರತಿಭಾವಂತರಿಗೆ ಪ್ರಶಸ್ತಿ, ಪುರಸ್ಕಾರಗಳನ್ನು ನೀಡುವುದನ್ನು ಮಾಡುತ್ತ ಬಂದಿದೆ. ಇವುಗಳಲ್ಲಿ ಕಲಾಶಿಬಿರಗಳೂ ಸೇರಿವೆ. ಇಂಥದೊಂದು ಕಲಾಶಿಬಿರ ವಿಜಾಪುರದ ಬಸವ ವನದಲ್ಲಿ ನಡೆಯಿತು. ಹೆಬ್ಬಾರರ ನೆನಪಲ್ಲಿ ವಿವಿಧ ಆಶಯದ ಕೃತಿಗಳು ಅರಳಿದವು.



ರೇಖಾ ಹೆಬ್ಬಾರ್‌ರಾವ್ ಅಕ್ರಿಲಿಕ್ ಮಾಧ್ಯಮ - 1998

ನಾಡಿನ ಎಂಟು ಕಲಾವಿದರು ಪಾಲ್ಗೊಂಡ ಈ ಕಲಾ ಶಿಬಿರದಲ್ಲಿ ಹೆಬ್ಬಾರ್ ಕುಟುಂಬದ ಸದಸ್ಯರು ಹಿರಿಹಿರಿಯಾಗಿ ಭಾಗಿಯಾಗಿದ್ದರು. ಕಲಾ ಇತಿಹಾಸ ಸಂಶೋಧಕಿ ರಜನಿ ಪ್ರಸನ್ನ, ಕಲಾವಿದೆ ರೇಖಾ ಹೆಬ್ಬಾರ್‌ರಾವ್, ರನ್ನ ಹೆಬ್ಬಾರ್ ಹಾಗೂ ಹೆಬ್ಬಾರರ ಪತ್ನಿ ಸುಶೀಲಾತಾಯಿ ಹೆಬ್ಬಾರ್, ಸ್ಥಳೀಯ ಸಂಘಟಕ ಭೋಜಣ್ಣ ಬೀಳಗಿ ಉಪಸ್ಥಿತರಾಗಿ ವರ್ಣರಂಜಿತ ಶಿಬಿರಕ್ಕೆ ಕಳೆ ತಂದರು.

ಬರದ ನಾಡಿನ ಜಿಲ್ಲೆಯ ವಿಜಾಪುರ ಕಲಾರಸದಿಂದ ಒದ್ದೆಗೊಳ್ಳುವಂತೆ ಎಂಟು ಕಲಾವಿದರು ತಮ್ಮ ತಮ್ಮ ಅನುಭವ ಪಾತಳಿಯ ಮೇಲೆ ಕಲಾತ್ಮಕವಾದ ಎಂಟು ಕೃತಿಗಳನ್ನು ಕ್ಯಾನವಾಸಿನ ಮೇಲೆ ಒಡಮೂಡಿಸಿದರು.

ವಾಸ್ತವವಾದಿ ಚಿತ್ರ ರಚನೆಯಲ್ಲಿ ಹೆಸರಾದ ಹುಬ್ಬಳ್ಳಿಯ ಎಂ. ಸಿ. ಚೆಟ್ಟಿಯವರು ತಮ್ಮ ಕೃತಿಗೆ ಆಯ್ದುಕೊಂಡ ವಸ್ತು ''ಸಂತೆಗೆ ಬಂದವರು'' ವಿಜಾಪುರ ಸಂತೆಯ ನೋಟವನ್ನು ವಾಸ್ತವ ಶೈಲಿಯಲ್ಲಿ ನಿರೂಪಿಸಿದರು. ತೆಳು ಬೂದು ವರ್ಣದ ಹಿನ್ನೆಲೆಯಲ್ಲಿ ಮೂಡಿದ ಹಳ್ಳಿಯ ರೈತ, ಇಬ್ಬರು ಹೆಂಗಸರು ಗ್ರಾಮ್ಯ ಸಂಸ್ಕೃತಿಯ ಅಂಶದಿಂದ ಗಮನ ಸೆಳೆಯುತ್ತಾರೆ..ಉಡುಗೆ, ತೊಡುಗೆ, ಮುಖಭಾವದ ಮುಗ್ಧತೆ ಪ್ರಕಟಸುವಲ್ಲಿ ಅವರು ಗೆದ್ದಿದ್ದಾರೆ.

ನಿಸರ್ಗ ಚೆಲುವು, ಅದರ ಸಂಪತ್ತು ಮತ್ತು ಪ್ರಕೃತಿ ಆಳದಲ್ಲಡಗಿದ ಪ್ರಕ್ಷೋಭನೆಗಳು ಅದರ ಚೆಲುವಿನಷ್ಟೇ ಕ್ರೂರ ಹಾಗೂ ಬರ್ಬರತೆಯನ್ನು ಹೊಂದಿರುವುದನ್ನು ಬೆಳಗಾವಿಯ ಡಿ. ಎಸ್. ಚೌಗಲೆಯವರ 'ದಿ ಪವರ್ ಆಫ್ ಅರ್ಥ್' ಕೃತಿ ಮಂದ ಹಾಗೂ ಪ್ರಖರ ವರ್ಣಗಳಿಂದ ಸಂಯೋಜನೆಗೊಂಡಿದೆ.

ಪುರುಷರ ಮೃಗೀಯ ನಡವಳಿಕೆಯನ್ನು ಸ್ತ್ರೀವಾದದ ಹಿನ್ನೆಲೆಯಲ್ಲಿ ಚಿತ್ರ ರಚಿಸುತ್ತಿರುವ ಧಾರವಾಡದ ಗಾಯತ್ರಿ ದೇಸಾಯಿ, ಇಲ್ಲಿಯೂ ಅದೇ ವಸ್ತುವನ್ನು ತಂದುಕೊಂಡಿರುವವರು. ಮುಕ್ತಗೊಳ್ಳುವ ಸಾಂಕೇತಿಕ ಟಚ್‌ನಿಂದ ಅವರ ''ಶೀರ್ಷಿಕೆ ರಹಿತ'' ಕೃತಿ ಗಮನ ಸೆಳೆಯುತ್ತದೆ. ಹೂವು, ಪುಟ್ಟ ಹಕ್ಕಿ ಅಕ್ರಿಲಿಕ್ಕಿನ ವರ್ಣದಲ್ಲಿ ಸಂಯೋಜನೆ ಪಡೆದ ಕೃತಿಯು ಅರ್ಥಪೂರ್ಣ ಎನ್ನಿಸುವುದು.

ಮುಂಬೈ ನಿವಾಸಿ ರೇಖಾ ಹೆಬ್ಬಾರ್‌ರಾವ್ ಅವರಿಗೆ ವಿಜಾಪುರದ ಭೂತನಾಳ ಕೆರೆ ಕಾಡಿದೆ. ಪದರು ಪದರುಗಳು ಮೂಡುವ ಪರಿಯಲ್ಲಿ ಅಕ್ರಲಿಕ್ ಮಾಧ್ಯಮವನ್ನು ದುಡಿಸಿಕೊಂಡ ರೇಖಾ ಅವರು ಆ ಪದರುಗಳಲ್ಲಿ ವಿಶಿಷ್ಟ ಭಾವಾರ್ಥಗಳನ್ನು ತಂದಿದ್ದಾರೆ. ತೆಳು ನೀಲಿ ವರ್ಣ ಹಲವು ಕಲ್ಪನೆಗಳಿಗೆ ಹೂರಣವಾಗಿದೆ. ಕೆಳಗಿರುವ ಮೆಟ್ಟಿಲುಗಳು ಹಾಗು ಬರಿದಾದ ಕೊಡಗಳ ಸಾಲು ಇಡೀ ಕೃತಿಯನ್ನು ಮೌಲಿಕ ಸಮತೋಲನಕ್ಕೆ ತರುತ್ತದೆ.

ಮೋಹಕ ಬಣ್ಣಗಳ ಪ್ರಯೋಗದಲ್ಲಿ ಸಿದ್ಧಹಸ್ತರಾದ ಜಮಖಂಡಿಯ ವಿಜಯ ಸಿಂಧೂರರು ವಿಜಾಪುರದ ಐತಿಹಾಸಿಕ ಸ್ಮಾರಕಗಳನ್ನೇ ವಸ್ತುವಾಗಿಸಿ ಕ್ಯಾನವಾಸಿಗೆ ತಂದಿರುವರು. ಗಾಢ ಮಂಜಿನ ಅನುಭವ ನೀಡುವ ಕೃತಿಯಲ್ಲಿ ಮೂರೇ ವರ್ಣಗಳ ಪ್ರಯೋಗ ಅದ್ಭುತ ! ಕಪ್ಪು, ಹಸಿರು, ಬೂದು ವರ್ಣಗಳ ಪದರುಗಳು ''ಲ್ಯಾಂಡ್ ಸ್ಕೇಪ್'' ಗೆ ಜೀವತ್ವ ಮತ್ತು ಕಲಾತ್ಮಕತೆಯನ್ನು ಕೊಟ್ಟು, ಕೃತಿ ವಿಶಿಷ್ಟವಾಗಿ ಕಾಣುವಂತೆ ಮಾಡುತ್ತದೆ.

ಬಾಬುರಾವ ನಾಡೋಣಿಯವರ (ರಾಯಬಾಗ) ಸಿತಾರ ನುಡಿಸುವ ಮಹಿಳೆಯ ಅಮೂರ್ತ ತೈಲಚಿತ್ರ ಹಲವು ಬಣ್ಣಗಳ ಬಳಕೆಯಿಂದ ಸುಖ ಹರಸುತ್ತದೆ. ಕುಂಚದ ಬೀಸು, ವರ್ಣಗಳ ಬಳುಕಾಟ ಕೃತಿಯಲ್ಲಿಯ ಸಂಗೀತ ರಸ ಭಾವನೆಗಳನ್ನು ತೆರೆದಿಡುತ್ತದೆ.

ಧಾರವಾಡದ ಮಧು ದೇಸಾಯಿಯವರ ಅಕ್ರಿಲಿಕ್ಕಿನ ಪ್ರಕಾರದಲ್ಲಿ ''ವಾಯು'' ಕೃತಿ ಕೇವಲ ಎರಡು ವರ್ಣದಲ್ಲಿದೆ. ದಟ್ಟ ಬಿಳಿ ವರ್ಣದ ಉಬ್ಬು ಗಾಳಿಯ ರಭಸದ ಭಾವ ನೀಡಿದರೆ ಹಳದಿ ಬಣ್ಣ ಹಿನ್ನೆಲೆಯ ರೂಪದಲ್ಲಿದೆ. ಅವರ ಪಂಚಮಹಾಭೂತಗಳ ಸರಣಿಯಲ್ಲಿ ಇದೂ ಒಂದು.

ಪಿ.ಎಸ್. ಕಡೇಮನಿ ತಿಳಿ ಮಸುಕಾದ ವರ್ಣ ಪಾತಳಿಯಲ್ಲಿ ಯಾತ್ರೆಯಿಂದ ಬಂದ ಮಹಿಳೆ ಮತ್ತು ಬಾಲಕನ ಅಮೂರ್ತ, ಮೂರ್ತ ಎರಡನ್ನೂ ಮೈಗೂಡಿಸಿಕೊಂಡ ಗ್ರಾಮೀಣ ಉತ್ಸವದ ನೆನಪನ್ನು ತರುವ ಚಿತ್ರ ರಚಿಸಿದ್ದಾರೆ. ಕುಂಚದ ಹೊಡೆತವನ್ನು ಹೆಚ್ಚಾಗಿ ನಂಬಿರುವ ಅವರ ಕೃತಿಗಳು ಮೃದುತ್ವದ ಛಾಯೆಯಲ್ಲೇ ಇರುತ್ತವೆ. ಅಂಥದೇ ಪ್ರಕಾರದಲ್ಲಿ ಈ ಕೃತಿ ನಿಲ್ಲುತ್ತದೆ.

ಒಟ್ಟು ಎಂಟು ಕಲಾವಿದರ ಕೃತಿಗಳ ರಚನೆ ಜತೆಗೆ ಕಲಾಚಿಂತನೆ, ಕಲೆಯನ್ನು ಜನಮಾನಸ ತನಕ ಒಯ್ಯುವ ಸಂದರ್ಭದಲ್ಲಿಯ ಆಲೋಚನೆಗಳು ಇಲ್ಲಿ ವ್ಯಕ್ತವಾದವು. ಹೆಬ್ಬಾರ್ ಪ್ರತಿಷ್ಠಾನವು ಕಲೆಯ ಅಭಿರುಚಿ ಬೆಳೆಸುವಲ್ಲಿ ಇಟ್ಟ ಹೆಜ್ಜೆಗಳಲ್ಲಿ ವಿಜಾಪುರದ ಕಲಾಶಿಬಿರವು ಒಂದು ಮಹತ್ವದ ಹೆಜ್ಜೆಯೇ ಆಗಿದೆ. ಸ್ಥಳೀಯರು ಇದಕ್ಕೆ ಸ್ಪಂದಿಸಿದ್ದು ಅಭಿನಂದನೀಯ.

ಪ್ರಜಾವಾಣಿ : 11. 1.98 ಡಿ.ಎಸ್. ಚೌಗಲೆ

# ಅಖಿಲ ಭಾರತ ಚಿತ್ರಕಲಾ ಪ್ರದರ್ಶನದಲ್ಲಿ ಕರ್ನಾಟಕದ ಕಲಾವಿದರು

ಕಳೆದ ತಿಂಗಳು ಉತ್ತರ ಪ್ರದೇಶದ ಲಖನೌ ಐತಿಹಾಸಿಕ ನಗರದ ರೀಜನಲ್ ಸೈನ್ಸ್ ಸೆಂಟರ್ ಗ್ಯಾಲರಿಯಲ್ಲಿ ಕೇಂದ್ರ ಲಲಿತ ಕಲಾ ಅಕಾಡೆಮಿಯು 34ನೇ ಅಖಿಲ ಭಾರತ ಚಿತ್ರ ಕಲಾ ಪ್ರದರ್ಶನವೊಂದನ್ನು ಏರ್ಪಡಿಸಿತ್ತು. ಈ ಅಭೂತಪೂರ್ವ ಸಮಾರಂಭವನ್ನು ಉತ್ತರ ಪ್ರದೇಶದ ರಾಜ್ಯಪಾಲರಾದ ಶ್ರೀ ಬಿ. ಸತ್ಯನಾರಾಯಣ ರೆಡ್ಡಿಯವರು ಉದ್ಘಾಟಿಸಿದರು. ''ಕಲೆಯು ದೇಶದ ಏಕತೆ, ಭಾವೈಕ್ಯತೆ ಹಾಗೂ ಸಂಸ್ಕೃತಿಯನ್ನು ಪ್ರತಿನಿಧಿಸುವ ಸರ್ವಕಾಲಿಕ ಸತ್ಯವು'' ಎಂಬುದಾಗಿ ಮಾತನಾಡುತ್ತ ಭಾರತದ ವಿವಿಧ ಪ್ರಾಂತಗಳ ಕಲಾವಿದರು ದೇಶದ ಭಾವೈಕ್ಯತೆಯನ್ನು ಕುರಿತು ರಚಿಸಿದ ವಿವಿಧ ಕಲಾಕೃತಿಗಳನ್ನು ವೀಕ್ಷಿಸಿ ಶ್ಲಾಘಿಸಿದರು. ಶ್ರೀ ರಾಮನಿವಾಸ ಮಿರ್ಧಾ ಅವರು ಅಧ್ಯಕ್ಷತೆ ವಹಿಸಿದ್ದರು.

ಸ್ಪರ್ಧೆಗೆ ಬಂದ ಒಟ್ಟು 1,638 ಕಲಾಕೃತಿಗಳಲ್ಲಿ ಭಾರತದ ಶ್ರೇಷ್ಠ ಕಲಾವಿದರು, ಕಲಾ ವಿಮರ್ಶಕರನ್ನು ಒಳಗೊಂಡ ನಿರ್ಣಾಯಕ ಸಮಿತಿಯು ಅವುಗಳಲ್ಲಿ 193 ಪೇಂಟಿಂಗ್ಸ್‌ಗಳನ್ನು ಹಾಗೂ 116 ಗ್ರಾಫಿಕ್ಸ್ ಹಾಗೂ 64 ಮೂರ್ತಿಶಿಲ್ಪ ಕಲಾಕೃತಿಗಳನ್ನು ಆಯ್ಕೆ ಮಾಡಿತು. ನಿರ್ಣಾಯಕವು ಬಹಳ ಕಷ್ಟದಾಯಕವಾಗಿದ್ದರೂ ಕೂಡ ಬಹಳಷ್ಟು ಕಲಾಕೃತಿಗಳು ಗಂಭೀರ ಚಿಂತನೆಗಳಿಂದ ಒಳಗೊಂಡಿರಲಿಲ್ಲ ಎಂಬುದಾಗಿ ಆಯ್ಕೆ ಸಮಿತಿ ತಿಳಿಸಿದೆ. ಹೀಗೆ ಆಯ್ಕೆಗೊಂಡ ಕಲಾಕೃತಿಗಳ ಪ್ರದರ್ಶನದಲ್ಲಿ ಈ ಸಲ ಕರ್ನಾಟಕದ ಹನ್ನೊಂದು ಕಲಾವಿದರ ಚಿತ್ರಗಳು ಆಯ್ಕೆಗೊಂಡಿರುವುದು ಕರ್ನಾಟಕ ಚಿತ್ರಕಲೆಯ ಹೆಗ್ಗಳಿಕೆಯಾಗಿದೆ. ಅದರಲ್ಲೂ ಉತ್ತರ ಕರ್ನಾಟಕದ ಕಲಾವಿದರಾದ ಗದುಗಿನ ಸರ್ವಶ್ರೀ ಅಶೋಕ ಅಕ್ಕಿ, ಆರ್.ವಿ. ಹೆಗಡೆ, ಗುಲ್ಬರ್ಗಾದ ಶ್ರೀ ವಿ.ಜಿ. ಅಂದಾನಿ, ಜೆ.ಎಸ್.ಖಂಡೇರಾವ್, ಎಂ.ಬಿ. ಲೋಹರ್, ಅನಿಲ ಬಿಹಾರಿ ಹಾಗೂ ಇನ್ನುಳಿದ ಬೆಂಗಳೂರಿನ ಐವರು ಶ್ರೀ ಮರಿಶಾಮಾಚಾರ್ಯ, ನರಹರಿ, ಬಿ. ಗಣಪತ್, ಕೆ. ರವಿಕುಮಾರ್, ಯು. ಭಾಸ್ಕರ್‌ರಾವ್ ಹಾಗೂ ವಿ. ವಲ್ಲೀಶ್ ಅವರ ಚಿತ್ರಗಳು ಆಯ್ಕೆಯಾಗಿವೆ.

ಪ್ರತಿವರ್ಷ ಬರೋಡಾ, ಮದ್ರಾಸ್, ದೆಹಲಿ ಹಾಗೂ ಕಲಕತ್ತಾಗಳಿಗೇ ಹೆಚ್ಚು ಪ್ರಾಶಸ್ತ್ಯವಿದ್ದರೆ ಈ ಸಲ ಕರ್ನಾಟಕದ ಹೆಚ್ಚು ಪಾಲಿನ ಕಲಾಕೃತಿಗಳು ಆಯ್ಕೆ ಹೊಂದಿರುವುದು ಕರ್ನಾಟಕ ಹೆಮ್ಮೆ ಹಾಗೂ ಅಭಿಮಾನ ಪಡುವಂತಾಗಿದೆ. ರಾಷ್ಟ್ರಮಟ್ಟದಲ್ಲಿ ಪುರಸ್ಕಾರಗೊಂಡ ಇಪ್ಪತ್ತು ಜನ ಕಲಾವಿದರಲ್ಲಿ ಗದುಗಿನ ಶ್ರೀ ಅಶೋಕ ಅಕ್ಕಿಯವರು ಒಬ್ಬರು. 75 X 61 ಸೆ.ಮೀ. ಅಳತೆಯ ತೈಲವರ್ಣದ ಅವರ ಸಂಯೋಜನಾ ಚಿತ್ರಕ್ಕೆ ಪುರಸ್ಕಾರ ದೊರೆತಿರುವುದು ಕರ್ನಾಟಕಕ್ಕೆ ಮತ್ತೊಂದು ಹೆಚ್ಚಿನ ತುರಾಯಿ. ಈ ಹಿಂದೆ ಶ್ರೀ ವಿಜಯ ಸಿಂಧೂರ, ಶ್ರೀ ಉಮೇಶ ಹಡಪದ ಅವರಿಗೆ ಈ ಪುರಸ್ಕಾರ ದೊರೆತಿತ್ತು. ಐದು ವರ್ಷಗಳ ನಂತರ ಕರ್ನಾಟಕಕ್ಕೆ ಮತ್ತೆ ಈ

ಪ್ರಶಸ್ತಿ ದೊರೆತಿರುವುದು ಅಭಿನಂದನೀಯವಾದುದು. ಆದರೆ ಪ್ರಶಸ್ತಿ ಸಹಿತ ನಗದು ಹಣ ದೊರೆತಿರುವ ಹತ್ತು ಜನ ಕಲಾವಿದರಲ್ಲಿ ಕರ್ನಾಟಕದ ಒಬ್ಬ ಕಲಾವಿದರೂ ಇಲ್ಲದಿರುವುದು ಶೋಚನೀಯ ಸಂಗತಿ.

ದೇಶದ ಬಹುತೇಕ ಎಲ್ಲ ರಾಜ್ಯಗಳಿಂದ ಹಿರಿಯ-ಕಿರಿಯ, ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದ ಅನೇಕ ಕಲಾವಿದರು ಈ ಪ್ರದರ್ಶನದಲ್ಲಿ ಭಾಗವಹಿಸಿದ್ದರು. ಸಾಂಪ್ರದಾಯಿಕ, ಸಮಕಾಲೀನ ಕೃತಿಗಳು ಹಲವು ವಿಭಿನ್ನ ಶೈಲಿಗಳಲ್ಲಿ, ವಿಭಿನ್ನ ಮಾಧ್ಯಮಗಳಲ್ಲಿ ಉತ್ಕೃಷ್ಟಮಟ್ಟದ ನೆರಳು-ಬೆಳಕಿನ ಪ್ರಬಲ ರೇಖೆಗಳಿಂದ ಸಂಯೋಜಿಸಿದ ಚಿತ್ರಗಳು, ಆಕರ್ಷಕ ವಿಗ್ರಹಗಳ ಕೆತ್ತನೆಯಿಂದ ಪ್ರದರ್ಶನಗೊಂಡ ಕಲಾಪ್ರದರ್ಶನವು ಕಲಾಭಿಮಾನಿಗಳ ಕಣ್ಣುಗಳನ್ನು ಕೋರೈಸುವಂತಿದ್ದರೆ ಮನಸ್ಸನ್ನು ಹಲವಾರು ಯೋಚನೆಗಳಿಂದ ರಂಗು ರಂಗಿನ ಬಣ್ಣದ ಸಂಯೋಜನಾ ಚಿತ್ರಗಳು ರಂಗುಗೊಳಿಸುವಂತಿತ್ತು.

ಸಂಯುಕ್ತ ಕರ್ನಾಟಕ: 1.2.98 **-ಅನ್ನದಾನಿ ಹಿರೇಮಠ**

# ವೈಶಿಷ್ಟ್ಯದ ಒಂದು ಕಲಾಶಿಬಿರ

ಕಲಬುರ್ಗಿಯ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಹತ್ತು ದಿನಗಳ ಒಂದು ಕಲಾಶಿಬಿರ ನಡೆಸಿತು. ಚಿತ್ರ, ಮುದ್ರಣ ಮತ್ತು ಶಿಲ್ಪ ಈ ಕಲೆಗಳಲ್ಲಿ ಪರಿಗಣಿತರಾದ 31 ಜನ ಕಲಾವಿದರು ಭಾಗವಹಿಸಿದ್ದರು. ದಿಲ್ಲಿ, ಮುಂಬೈ, ಪೂನಾ, ಹೈದ್ರಾಬಾದ್, ಬರೋಡಾ, ಬೆಂಗಳೂರು, ತುಮಕೂರು, ಬೆಳಗಾಂ, ಮೈಸೂರು, ಹುಮನಾಬಾದ್, ಕಲಬುರ್ಗಿ ಹೀಗೆ ಭಾರತ ಮತ್ತು ಕರ್ನಾಟಕದ ತುಂಬಾ ಬೇರೆ ಬೇರೆ ಕಡೆ ನೆಲೆನಿಂತ ಫೈನ್ ಆರ್ಟ್ ಸಂಸ್ಥೆಯ ಹಳೆಯ ವಿದ್ಯಾರ್ಥಿಗಳನ್ನೇ ಈ ಶಿಬಿರದಲ್ಲಿ ಭಾಗವಹಿಸುವಂತೆ ಮಾಡಿದ್ದು ಇದರ ಒಂದು ವೈಶಿಷ್ಟ್ಯವಾಗಿತ್ತು. ಇವರೆಲ್ಲರ ಜೊತೆ ಸಂಸ್ಥೆಯ ಶಿಕ್ಷಕ ವರ್ಗ ಮತ್ತು ಸಂಸ್ಥೆಯನ್ನು ಹುಟ್ಟು ಹಾಕಿದ ಜೆ.ಎಸ್. ಖಂಡೇರಾವ್, ಬೆಳೆಸಿದ ವಿ.ಜಿ. ಅಂದಾನಿ ಅವರೆಲ್ಲರ ಒಟ್ಟಿಗೆ ಕೂಡಿ ಕೆಲದಿನ ಇರಬೇಕೆಂಬ ಆಲೋಚನೆಯ ಫಲವಾಗಿ ಈ ಶಿಬಿರ ಮೂಡಿಬಂದಿತು. ಇವರೆಲ್ಲ ಹತ್ತು ದಿನ ತಮ್ಮ ಕೆಲಸದಲ್ಲಿ ತೊಡಗಿರಬೇಕಾದರೆ ಸಂಸ್ಥೆಯಲ್ಲಿ ಈಗ ಕಲಿಯುತ್ತಿರುವ ವಿದ್ಯಾರ್ಥಿಗಳು ಅವರಿಗೆ ಸಹಾಯಕರಾಗಿ ಸ್ಫೂರ್ತಿ ಪಡೆಯಲೆಂಬ ಉದ್ದೇಶವೂ ಇಲ್ಲಿ ಮುಖ್ಯವಾಗಿತ್ತು.

ಶಿಬಿರದ ದಿನಗಳಲ್ಲಿ ಒಬ್ಬೊಬ್ಬ ಕಲಾವಿದ ಎರಡೆರಡು ಚಿತ್ರಗಳನ್ನು ಬಿಡಿಸಿದ್ದ. ಅವುಗಳಲ್ಲಿ ಬಹುತೇಕವೆಲ್ಲಾ ನವ್ಯಕಲೆಗೆ ಸಂಬಂಧಿಸಿದವು. ಈ ಕಲಾಕೃತಿಗಳನ್ನು ಪರಿಚಯ ಮಾಡಿಕೊಳ್ಳುವುದು ಮತ್ತು ಸರಳವಾಗಿ ಅರ್ಥೈಸಿಕೊಳ್ಳುವುದು ಸುಲಭವೇನೂ ಅನಿಸಲಿಲ್ಲ, ಆದರೆ ಕಲಾವಿದರು ತಮ್ಮ ಭಾವನೆಗಳನ್ನು ಹಿಡಿದಿಡಲು ಬಳಸಿದ ಬಣ್ಣಗಳು, ಎಳೆದ ಗೆರೆಗಳು ಅವುಗಳ ಪ್ರಮಾಣ, ಕಾಯ್ದುಕೊಂಡ ಸಮತೋಲನ - ಈ ಕ್ಷೇತ್ರಕ್ಕೆ ಅಪರಿಚರಾದವರನ್ನೂ ಹಿಡಿದು ನಿಲ್ಲಿಸುವ ಶಕ್ತಿಯನ್ನು ಹೊಂದಿದ್ದವು.

ಒಬ್ಬ ಸಾಹಿತ್ಯದ ವಿದ್ಯಾರ್ಥಿ ಒಂದು ಕಾವ್ಯವನ್ನು ಅನುಭವಿಸಿದಂತೆ ಒಂದೊಂದು ಚಿತ್ರವೂ ಒಂದೊಂದು ಕವಿತೆಯಂತೆಯೇ ಭಾಸವಾದವು. ಆಧ್ಯಾತ್ಮಿಕ, ಪೌರಾಣಿಕ, ಜಾನಪದ, ದೈನಂದಿನ ಬದುಕು - ಹೀಗೆ ಯಾವುದೇ ಕಲ್ಪನೆಗೆ ಆಕಾರವನ್ನು ಕೊಟ್ಟಿದ್ದರೂ ಅಲ್ಲೆಲ್ಲಾ ಈ ಕಲಾವಿದರು ಪ್ರಸ್ತುತ ಬದುಕನ್ನು ಅರ್ಥೈಸುವ ಪ್ರಯತ್ನಗಳೇ ಕಾಣುತ್ತಿದ್ದವು. ಓದಿದ ಕೂಡಲೇ ಇದು ಕುವೆಂಪು ಕವಿತೆ, ಇದು ಬೇಂದ್ರೆ ಕವಿತೆ ಎಂದು ಗುರುತಿಸಲು ಸಾಧ್ಯವಾಗುವಂತೆ ಒಬ್ಬ ಕಲಾವಿದನ ಚಿತ್ರಗಳನ್ನು ಗಮನಿಸಿದರೂ ಗುರುತಿಸುವಿಕೆ ಸಾಧ್ಯವಾಗುವ ರೀತಿಯಲ್ಲಿ ಕಲಾವಿದರು ತೆಗೆದ ಎರಡೆರಡು ಚಿತ್ರಗಳಲ್ಲೂ ಭಾವದ ಸಾಮ್ಯತೆ ಢಾಳಾಗಿ ಎದ್ದು ಬರುತ್ತಿತ್ತು.

ಹೆಚ್ಚಿನ ಕಲಾವಿದರಲ್ಲಿ ಬಳಸಿಕೊಂಡ ಕಲ್ಪನೆಗಳು ಜಾನಪದ ಮತ್ತು ದೈನಂದಿನ ಬದುಕಿನ ಸಂಗತಿಗಳನ್ನೇ ಆಧರಿಸಿದ್ದವು. ವಿ.ಬಿ. ಬಿರಾದರ, ಪಿ.ಬಿ. ಹರಸೂರ, ಶ್ರೀಮತಿ ಜ್ಯೋತಿ ದೇಶಪಾಂಡೆ, ಕಿಶೋರ ಕುಮಾರ, ಮುಂತಾದವರು ಇಂತಹ ಚಿತ್ರಗಳನ್ನು ಮೂಡಿಸಿದ್ದರು. ಇವರೆಲ್ಲಾ ಪರಂಪರೆಯನ್ನು ಉಳಿಸಿಕೊಳ್ಳುತ್ತಾ ಬದುಕು ಬದಲಾವಣೆಗೆ ಬಗ್ಗಬೇಕೆಂಬ ಮನಸ್ಸುಳ್ಳವರಂತೆ ಕಂಡರು. ಯಾವುದೇ ಕಲಾ ಪ್ರಪಂಚದಲ್ಲಿ ಇಂತಹ ಪರಂಪರೆಯ ಪ್ರಜ್ಞೆ ಮತ್ತು ಕಾಳಜಿಗಳು ವ್ಯಕ್ತವಾಗುವುದು ಸಹಜವೇ.

ಶೇಷಿರಾವ್ ಬಿರಾದಾರ ಇನ್ನೂ ಚಿಕ್ಕವಯಸ್ಸಿನವರು. ಆಧ್ಯಾತ್ಮದ ಪರಿಕಲ್ಪನೆಗಳನ್ನು ತಮ್ಮ ಚಿತ್ರಗಳಲ್ಲಿ ಮೂಡಿಸುವ ಸಾಮರ್ಥ್ಯ ಹೊಂದಿದ್ದಾರೆ. ಬಣ್ಣದ ಬಳಕೆಯಿಂದ ಮೂಡಿಸುವ ವಿಸ್ತಾರ ಆಳಗಳು, ಧ್ಯಾನದ ಮುದ್ರೆಗಳು, ತಕ್ಕ ಪರಿಸರ ಅದರಲ್ಲೇ ಮನುಷ್ಯನ ವರ್ತಮಾನದ ಸ್ವಭಾವಗಳನ್ನು ಬಿಂಬಿಸುವ ಗುಣ ಮತ್ತು ಪರಿಣಾಮದ ಮೊತ್ತ ಎಲ್ಲವೂ ಅನುಭವಕ್ಕೆ ಬರಿಸುವ ಶಕ್ತಿ ಇವರ ಚಿತ್ರಗಳಲ್ಲಿ ಕಾಣುತ್ತದೆ. ಬಸವರಾಜ ಜಾನೆ ಅವರ ಚಿತ್ರಗಳಲ್ಲಿ ಸಂಕೀರ್ಣತೆಯ ಭಾವ ಎದ್ದು ಕಾಣುವಂತಹದ್ದು. ಬಸವರಾಜ ಉಪ್ಪಿನ ಅವರ ಚಿತ್ರಗಳಲ್ಲಿ ಅನೇಕ ಅಮೂರ್ತ ಆಕಾರಗಳಿದ್ದವು, ನಿರಂತರವಾದ ಕೃಷಿಯಿಂದ ಕೆಲದಿನ ದೂರ ಉಳಿದ ಅವರ ಕುಂಚ ನಿರ್ದಿಷ್ಟವಾದ ದಾರಿಯ ಹುಡುಕಾಟದಲ್ಲಿರುವ ಸೂಚನೆಗಳು ಅಲ್ಲಲ್ಲಾ ಕಂಡು ಬಂದವು. ಒಂದೇ ಬಗೆಯ ಹಲವಾರು ಆಕೃತಿಗಳನ್ನು ಪುನರಾವರ್ತಿಸಿ ಒಂದು ಶಕ್ತಿಶಾಲಿ ಭಾವವನ್ನು ಸೃಷ್ಟಿಸುವ ಕ್ರಮ ವೀರಣ್ಣ ರುಕುಂಪೂರ ಅವರ ಚಿತ್ರದಲ್ಲಿ ಕಾಣಿಸಿತು. ಹಣಮಂತ ಮಂತಟ್ಟಿ ಅವರು ವಾಯುಮಾಲಿನ್ಯದ ದುಷ್ಪರಿಣಾಮಗಳನ್ನು ತಮ್ಮ ಮುದ್ರಣ ಕಲೆಯೊಂದರಲ್ಲಿ ಮೂಡಿಸಿದ್ದು ಗಮನ ಸೆಳೆಯುತ್ತಿತ್ತು.

ಶಿಲ್ಪಕಲಾ ವಿಭಾಗದಲ್ಲಿ ಭಾಗವಹಿಸಿದವರು ಈರಣ್ಣ ಪಿ. ಕಂಬಾರ ಒಬ್ಬರೇ, ಇವರ ಶಿಲ್ಪಕಲೆಗಾಗಿ ಅಂದಾನಿ ಅವರು ತಮ್ಮ ಸಂಸ್ಥೆಯ ಮೈದಾನದ ಮುಖ್ಯ ಭಾಗದಲ್ಲಿ ಖಾಯಂ ಆಗಿ ನೆಲೆ ನಿಲ್ಲುವಂಥ ಸ್ಥಳ ಒದಗಿಸಿದ್ದಾರೆ. ಮನುಷ್ಯನು ತಾನು ನಿರ್ಮಿಸಿಕೊಂಡ ಸಂಕೋಲೆಗಳಿಂದ ತಾನೇ ಪ್ರಯತ್ನಪಟ್ಟು ಹೊರಬರಬೇಕಾಗುತ್ತದೆ ಎಂಬ ಸಂದೇಶವನ್ನು ಸಾರುವ ಶಿಲ್ಪಕಲೆ ಅದು. ಇದನ್ನು ನಿರ್ಮಿಸಲು ಕಬ್ಬಿಣದ ಸರಳುಗಳನ್ನು ಸಿಮೆಂಟ್ ಮತ್ತು ಕಲ್ಲಿನ ತುಕಡಿಗಳನ್ನು ಬಳಸಿಕೊಂಡು ಆರೇಳು ಅಡಿ ಎತ್ತರದ ಆಕರ್ಷಕ ಮೂರ್ತಿಯನ್ನು ವೀರಣ್ಣ ತಯಾರಿಸಿದ್ದಾರೆ.

ಪ್ರಜಾವಾಣಿ : 5.7.98

**ವೀರಣ್ಣ ದಂಡೆ**

# ಸುವರ್ಣ ಮಹೋತ್ಸವದಲ್ಲಿ ಕಲಾವಿದರ ಅಭಿವ್ಯಕ್ತಿ

ಕಲಾ ಪ್ರದರ್ಶನಗಳು, ಕಲಾ ಶಿಬಿರಗಳು, ನಿರಂತರವಾಗಿ ನಾಡಿನ ಪ್ರಮುಖ ಪಟ್ಟಣಗಳಲ್ಲಿ ನೆರವೇರುವುದನ್ನು ನಾವು ಕಾಣುತ್ತೇವೆ. ಇತ್ತೀಚೆಗಂತೂ ಕಲಾ ಪ್ರದರ್ಶನಗಳಿಗೆ ಕಲಾವಿದರೂ, ಕಲಾ ಸಂಗ್ರಹಕಾರರು ಅಭಿಮಾನಿಗಳು ಹಾಗೂ ವಿಮರ್ಶಕರು ಪಾಲ್ಗೊಳ್ಳುವ ಈ ಪ್ರಕ್ರಿಯೆಯಲ್ಲಿ ಒಂದು ನಿರ್ಧಿಷ್ಟ ಉದ್ದೇಶದಿಂದ ಕಲಾ ಪ್ರದರ್ಶನಗಳು ಮೂಡಿ ಬರುತ್ತವೆ. ಇಂತಹ ಪ್ರದರ್ಶನಗಳು ದೃಶ್ಯ ಕಲೆಗೆ ಸಂಬಂಧಪಟ್ಟ ವ್ಯಕ್ತಿಗಳನ್ನು ಒಂದೆಡೆ ಸೇರಿಸುವ ವೇದಿಕೆಯಾಗುವಲ್ಲಿ ಸಂಶಯವಿಲ್ಲ.

ಬೆಂಗಳೂರನ್ನು ಹೊರತು ಪಡಿಸಿದರೆ ಕಲಾ ಪ್ರದರ್ಶನಗಳು ಜಿಲ್ಲಾವಾರು ಪ್ರಾಂತ್ಯಗಳಲ್ಲಿ ಅತಿ ವಿರಳವೆನ್ನಬಹುದು. ಇಲ್ಲಿಯ ಕಲಾವಿದರು ಕಲಾಕೃತಿಯ ಮುಖಾಂತರ ಸ್ಥಳಿಯ ಕಲಾ ಪರಂಪರೆಯನ್ನು ಬೆಳೆಸಿಕೊಂಡು ಬಂದರೂ, ತಮ್ಮ ಅಭಿವ್ಯಕ್ತಿಯನ್ನು ಸಾರ್ವಜನಿಕಗೊಳಿಸಲು ಅಂದರೆ ಪ್ರದರ್ಶಿಸಲು ಪಟ್ಟಣ ಪ್ರದೇಶವನ್ನು ಅವಲಂಭಿಸಬೇಕಾದುದು ವಿಪರ್ಯಾಸವೇ ಸರಿ. ಕಲಾ ಪ್ರದರ್ಶನಗಳು ಕಲಾವಿದನ ಜಡ್ಡು ಪ್ರವೃತ್ತಿಗೆ ಚುರುಕು ಮುಟ್ಟಿಸಿ ತನ್ನನ್ನು ತಾನು ವಿಮರ್ಶಾತ್ಮಕವಾಗಿ ಪರೀಕ್ಷಿಸಿಕೊಳ್ಳಲು ಸಹಾಯಕಾರಿಯಾಗುತ್ತವೆ. ಅಲ್ಲದೆ ಕ್ರಿಯಾತ್ಮಕವಾಗಿ ತನ್ನನ್ನು ತೊಡಗಿಸಿಕೊಳ್ಳಲು ಇವುಗಳ ಪಾತ್ರ ಅತಿ ಮುಖ್ಯ. ಇದರಿಂದ ಕೊಡು - ತೆಗೆದುಕೊಳ್ಳುವ ಪ್ರಕ್ರಿಯೇ ಸಾಧ್ಯವಾಗಬಹುದು. ಆದರೆ ಕೆಲ ಪ್ರದೇಶಗಳ ಕಲಾವಿದರು ಇದರಿಂದ ವಂಚಿತರಾದುದು ಸ್ಪಷ್ಟವಾಗುತ್ತಿದೆ.

ಕರ್ನಾಟಕ ಸಮಕಾಲೀನ ಕಲಾ ಕ್ಷೇತ್ರದಲ್ಲಿ ಕಲಬುರ್ಗಿಯ ಕಲೆಗೆ ವಿಶಿಷ್ಟವಾದ ಸ್ಥಾನವಿದೆ. ಅದಕ್ಕೆ ಪೂರಕವೆಂಬಂತೆ ಒಂದರ ಹಿಂದೊಂದು ಪ್ರದರ್ಶನಗಳು ಕಲಾ ಶಿಬಿರಗಳು ಹಾಗೂ ಕಲೆಯ ಕುರಿತು ಚರ್ಚೆಗಳು ನಿರಂತರವಾಗಿ ಇಲ್ಲಿ ನಡೆಯುತ್ತಿರುತ್ತವೆ. ಹೈದ್ರಾಬಾದ ಕರ್ನಾಟಕ ಹಿಂದುಳಿದ ಪ್ರದೇಶವೆಂದು ಎಲ್ಲರಿಗೂ ತಿಳಿದ ವಿಷಯ. ಆದರೆ ಇಲ್ಲಿಯ ಜನ ಸಮಕಾಲೀನ ಕಲೆಯನ್ನು ಆಸ್ವಾದಿಸುವಲ್ಲಿ ಹಿಂದೆ ಬಿದ್ದಿಲ್ಲಾ.

ಸಮಕಾಲಿನ ಕಲೆಯನ್ನು ಸರ್ವಾಜನಿಕರಿಗೆ ಪರಿಚಯಿಸುವ ನಿಟ್ಟಿನಲ್ಲಿ ಇಲ್ಲಿನ ಅನೇಕ ಕಲಾ ಸಂಸ್ಥೆಗಳು ಕಲಾ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಲೇ ಇರುತ್ತವೆ. ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆ, ಶ್ರೀ ಶರಣಬಸವೇಶ್ವರ ಕಲಾ ಮಹಾವಿದ್ಯಾಲಯ, ಗುಲಬರ್ಗಾ ವಿಶ್ವವಿದ್ಯಾಲಯ ಹಾಗೂ ತಾಸ್ಮಿಯಾ ಆರ್ಟ್ ಹೌಸ್‌ನಂತಹ ಸಂಸ್ಥೆಗಳು ಅನೇಕ ಪ್ರದರ್ಶನಗಳನ್ನು ಹಮ್ಮಿಕೊಳ್ಳುತ್ತಲೆ ಇರುತ್ತವೆ.

ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆ ಕರ್ನಾಟಕ ಕಲಾ ಪರಂಪರೆಯಲ್ಲಿ ತನ್ನ ಕಲಾ ಚಟುವಟಿಕೆಗಳಿಂದ ಚಿರಪರಿಚಿತವಾಗಿದ್ದು ಇತ್ತೀಚಿಗೆ ಭಾರತದ ಸುವರ್ಣ ಮಹೋತ್ಸವದ ಪ್ರಯುಕ್ತ ಕಲಾ ಶಿಬಿರ ಹಾಗೂ ಕಲಾ ಪ್ರದರ್ಶನವನ್ನು ಅಯೋಜಿಸಿತ್ತು. ಜೂನ್ 1 ರಂದು ಪ್ರಾರಂಭಗೊಂಡ ಚಿತ್ರ, ಶಿಲ್ಪ ಹಾಗೂ ಗ್ರಾಫಿಕ್ ಶಿಬಿರ ಸುಮಾರು ಹತ್ತು ದಿವಸಗಳ ಕಾಲ ಸಾಂಗವಾಗಿ ನೆರವೇರಿತು.

ಮನಸ್ಸನ್ನು ಅಲ್ಹಾದಗೊಳಿಸುವ ಕಲಾ ಕೃತಿಗಳಿಗಿಂತಲೂ ಬೌದ್ಧಿಕತೆಯನ್ನು ವೈಭವಿಕರಿಸುವ ಕೃತಿಗಳೆಡೆಗೆ ನಮ್ಮ ಕಲಾವಿದರು ಅದೆಂದೋ ವಾಲಿದ್ದಾರೆ. ವಾಸ್ತವಕ್ಕೆ ಸಮೀಪವಿರುವ ಕೃತಿಗಳು ಪ್ರಸ್ತುತ ಶಿಬಿರದಲ್ಲಿ ಅತಿ ವಿರಳವಾಗಿ ಕಂಡುಬರುತ್ತವೆ. ಲೋಕಯ್ಯಾ ಕೆ.ಎಂ. ಅವರು ಹಳ್ಳಿಯ ಪರಿಸರವನ್ನು ಹಿನ್ನಲೆಯಾಗಿಸಿಕೊಂಡು ಸಮಕಾಲೀನತೆಯ ಅಡಿಯಲ್ಲಿ ಅದನ್ನು ವ್ಯಕ್ತಪಡಿಸಿದ್ದು ಒಂದಾದರೆ ಅಮ್ರುತ್ ಸಾಹುರವರು ಆಕೃತಿಗಳನ್ನು ಅಳವಡಿಸಿ ಸೌಮ್ಯ ವರ್ಣಗಳ ಸಹಾಯದಿಂದ ಕೃತಿ ರಚಿಸಿದ್ದಾರೆ. ವಸ್ತು ವಿಷಯ ಸಾಮಾನ್ಯವಾಗಿದ್ದರೂ ನಿರೂಪಿಸಿರುವ ಶೈಲಿ ಹಾಗೂ ಕೃತಿ ವಾಸ್ತವಕ್ಕೆ ಹತ್ತಿರವಾದುದರಿಂದ ನೋಡುಗನಿಗೆ ನಿರಾಶೆಗೊಳಿಸಲಾರದು. ಖ್ಯಾತ ಕಲಾವಿದ, ಜೆ.ಎಸ್. ಖಂಡೇರಾಯ ಅವರ ಪ್ರಭಾವದಿಂದ ಹೊರಬಂದು ಲೋಕಯ್ಯ ಅವರು ಗಿರಿಜನರನ್ನು ತಮ್ಮ ಅಭಿವ್ಯಕ್ತಿಯ ಮೂಲ ವಿಷಯವನ್ನಾಗಿ ಆರಿಸಿಕೊಂಡು ಅಕಾಡೆಮಿಕ್ ಶೈಲಿಯ ಸಾಮಾನ್ಯ ನುಡಿಗಟ್ಟಿನ ಅಡಿಯಲ್ಲಿ ಕೃತಿ ರಚಿಸಿದ್ದಾರೆ. ಇವರಂತೆಯೆ ಮಾನವ ಕೃತಿಗಳನ್ನು ಬಳಸಿದ ಕಲಾವಿದರಲ್ಲಿ ಕಿಶೋರ ಕುಮಾರ ಒಬ್ಬರು. ಕಾಳಿಯ ಕಲ್ಪನೆಯನ್ನು ವಿನೂತನವಾಗಿ ನೀಡುವ ಪ್ರಯತ್ನ ಇವರದು. ಇಲ್ಲಿ ಕಾಳಿಯನ್ನು ನಗ್ನವಾಗಿ ಚಿತ್ರಿಸಿ ತಮ್ಮ ದಿಟ್ಟತನವನ್ನು ಮೆರೆದಿದ್ದಾರೆ.

ಮುಂಬೈಯ ಎಸ್.ಎಸ್. ಹತ್ತಿರಕಿಯವರ ಕೃತಿ ಇದೇ ನೆಲೆಯಲ್ಲಿ ಸಾಗುತ್ತದೆ. ಹಂದಿಗಳ ಜೀವನವನ್ನು ಬಿಂಬಿಸಲು ಪ್ರಯತ್ನ ಪಟ್ಟ ಕಲಾವಿದರು ವಿದ್ಯಾರ್ಥಿ ದೆಸೆಯಿಂದಲೂ ಇವುಗಳನ್ನು ತಮ್ಮ ಅಭಿವ್ಯಕ್ತಿಯ ವಿಷಯವನ್ನಾಗಿ ಬಳಸಿಕೊಂಡಿದ್ದಾರೆ. ಎಂ. ಬಿ. ಲೋಹಾರ ಅವರದು ವಿಶಿಷ್ಟ ಶೈಲಿ. ಮೊದಲು ತಮಗಿಷ್ಟವಾದ ವರ್ಣಗಳನ್ನು ಬಳಸಿ ಕೇವಲ ರೇಖೆಗಳಿಂದ ಕೃತಿಗೆ ಅಂತಿಮ ರೂಪ ಕೊಡುವ ಪರಿ ಇವರ ಸಹನೆಗೆ ಸಾಕ್ಷಿಯಾಗಿದೆ. ಪ್ರೊ.ವಿ.ಜಿ. ಅಂದಾನಿಯವರು ತಮ್ಮ ಎಂದಿನ ಶೈಲಿಯಲ್ಲಿ ಚಿತ್ರ ರಚಿಸಿದ್ದಾರೆ.

ಮೇಲೆ ಹೇಳಿದ ಕೃತಿಗಳು ಒಂದು ಗುಂಪಿಗೆ ಸೇರಿದ್ದರೆ ಅಮೂರ್ತತೆಯನ್ನು ಎತ್ತಿ ತೋರಿಸುವ ಕೆಲ ಕೃತಿಗಳೂ ಇಲ್ಲಿ ರಚಿಸಲ್ಪಟ್ಟಿದ್ದುಂಟು. ಕೇವಲ ಜಾಮಿತಿಕ ಆಕಾರಗಳನ್ನು ಬಳಸಿ ಬಣ್ಣಗಳ ಮುಖಾಂತರ ಕೃತಿಗೆ ರೂಪ ನೀಡಿದ ಕಲಾವಿದರು ಎ.ಕೆ. ಜೋಷಿ, ವಿರೇಂದ್ರ ಶಹಾ ಹಾಗೂ ಬಸವರಾಜ ಜಾನೆಯವರು. ಕೇವಲ ವರ್ಣಗಳ ಸಹಾಯದಿಂದ ದಪ್ಪನೆಯ ಮೈವಳಿಕೆಯನ್ನು ಅಥವಾ ಹಿನ್ನಲೆಯನ್ನು ಸೃಷ್ಟಿಸಿಕೊಂಡು ಅದರಲ್ಲಿ ಸಾಂಕೇತಿಕವಾಗಿ ಕೆಲ ಆಕೃತಿಗಳನ್ನು ರೂಪಿಸಿದ ದೆಹಲಿಯ ಕಲಾವಿದ ಈರಣ್ಣಾ ಆರ್. ರವರ ಕೃತಿಗಳೆರಡೂ ಇಲ್ಲಿ ಹೊಸತನದ ಪರಿಚಯವನ್ನು ನೀಡುವಲ್ಲಿ ಯಶಸ್ವಿಯಾದವು.

ತಟ್ಟನೆ ನೋಡಿದರೆ ಪ್ರಕಾಶ ಗಡಕರ್ ಹಾಗೂ ರಾಜಶೇಖರವರ ಕೃತಿಗಳೆರಡೂ ಒಂದೇ ಎಂಬ ಭ್ರಮೆಯನ್ನು ನೋಡುಗನಲ್ಲಿ ಹುಟ್ಟಸುವ ಇವರಿಬ್ಬರ ಕೃತಿಗಳು ವಾಸ್ತವವಾಗಿ ಬೇರೆ ಬೇರೆಯಾಗಿವೆ. ಪ್ರಕಾಶರವರು ಸಮುದ್ರದ ಅಲೆಗಳ ಆಕರ್ಷಣೆಗೆ ಒಳಗಾಗಿ ವರ್ಣಗಳನ್ನು ನೇರವಾಗಿ ಟೆಂಪ್ರಾವರ್ಣದ ಶೈಲಿಯಲ್ಲಿ ಬಳಸಿದರೆ, ರಾಜಶೇಖರವರು ವರ್ಣವನ್ನು ಸೌಮ್ಯವಾಗಿ ಲೇಪಿಸಿ ಕೃತಿಯನ್ನು ಒಂದು ವಿಷಯದ ಚೌಕಟ್ಟಿನಲ್ಲಿ ತಂದು ನಿಲ್ಲಿಸುವ ಪ್ರಯತ್ನ ಮಾಡಿದ್ದಾರೆ. ಕಲಾವಿದ ಸೂರ್ಯಪ್ರಕಾಶರ ಪ್ರಭಾವ ಇವರ ಮೇಲಿದ್ದರೂ ಸ್ವತಂತ್ರ ನಿರೂಪಣೆಯಿಂದ ಇವರ ಕೃತಿ ಭಿನ್ನವೆನ್ನಿಸುತ್ತದೆ.

ಅಕ್ರ್ಯಾಲಿಕ್, ಮೋಹನ್ ಶೀತನೂರರ ನೆಚ್ಚಿನ ಮಾಧ್ಯಮ. ಅರ್ಥಫಿಶ್ ಎಂಬ ಸರಣಿಯಲ್ಲಿ ತಮ್ಮನ್ನು ಅಭಿವ್ಯಕ್ತಿಸಿಕೊಳ್ಳುವ ಇವರು ಒರಟು ಮೈವಳಿಕೆ ತಯಾರು ಮಾಡಿ, ಸೀಮಿತ ಪ್ರದೇಶದಲ್ಲಿ ತಿಳಿ ಬಣ್ಣಗಳ ಸಹಾಯದಿಂದ ಆಕೃತಿ ರೂಪಿಸಿ, ನಭೋಮಂಡಲದ ಭ್ರಮೆಯಲ್ಲಿ (ಮೆಲ್ನೋಟಕ್ಕೆ) ತೇಲುವಂತೆ ಮಾಡುವ ಕಲಾವಿದರು ಬಣ್ಣಗಳ ಬಳಕೆಯಲ್ಲಿ ಹಿಡಿತವನ್ನು ಕಾಯ್ದುಕೊಂಡಿದ್ದು ಕಾಣಬಹುದು. ಅನೀಲಕುಮಾರ್ ಕುಪ್ಪಣ್ಣ ಕಂದಗಲ್, ಪ್ರಭು ಹರಸೂರ, ಪ್ರಕಾಶ್ ಕಾರ್ಚಗಿ, ಅಂಬಾರಾಯ ಚಿನ್ನಮಳ್ಳಿ, ತಮ್ಮ ಎಂದಿನ ಶೈಲಿಯಲ್ಲಿ ಕೃತಿ ರಚಿಸಿದ್ದಾರೆ. ಬಸವರಾಜ ಉಪ್ಪಿನರವರ ಕೃತಿಗಳು ಹೊಸತನದಿಂದ ಕೂಡಿದ್ದೂ ಅವರು ಹೊಸ ಶೈಲಿಯ ಅನ್ವೇಷಣೆಯಲ್ಲಿ ಇದ್ದಂತೆ ಭಾಸವಾಗುತ್ತದೆ. ಜ್ಯೋತಿ ಜೀವಣಗಿಕರ್, ಸೀಮಾ ದೇಶಪಾಂಡೆ ಹಾಗೂ ಪೂರ್ಣಿಮಾ ಪಾಟೀಲರು ಸ್ತ್ರೀ ಸಂವೇದನೆಗೆ ಪೂರಕವಾಗುವಂಥ ಕೃತಿಗಳನ್ನು ನೀಡಿದ್ದಾರೆ. ಜೆ.ಎಸ್. ಖಂಡೇರಾವ್ ಭಾವಚಿತ್ರಗಳನ್ನು ರೂಪಿಸುವಲ್ಲಿ ಸಿದ್ಧಹಸ್ತರು, ಅದಕ್ಕೆಂದು ಇಲ್ಲಿ ಅವರು ಭಾವಚಿತ್ರವನ್ನು ರಚಿಸಲು ಆಯ್ದುಕೊಂಡದ್ದು.

ಬಸವರಾಜ ಮುಸಾವಳಗಿ, ಆಂಧ್ರ ಪ್ರದೇಶದ ಅನಂತಯ್ಯ, ರಘುರಾಂ ಭೈರು, ಶಶಿಕಾಂತ ಮಾಶಾಳಕರ ಹಾಗೂ ಹೆಚ್. ಪುಂತಟ್ಟಿಯವರು ತಮ್ಮ ಭಾವನೆಗಳಿಗೆ ಚಾಲನೆ ನೀಡಲು ಗ್ರಾಫಿಕ್ ಮಾಧ್ಯಮವನ್ನು ಆಯ್ಕೆ ಮಾಡಿಕೊಂಡಿದ್ದರು. ಸಮಕಾಲೀನ ಸಂವೇದನೆಯ ಸೂಕ್ಷ್ಮ ಅಭಿವ್ಯಕ್ತಿಗೆ ಇದು ಪೂರಕವಾದಂತೆ, ತಮ್ಮ ಅಂತರಾಳದ ಹೊಯ್ದಾಟವನ್ನು ಹೊರತರಲು ಸಹಾ ಮಾಧ್ಯಮವನ್ನು ಪ್ರಭಾವಿಯಾಗಿ ಬಳಸಿಕೊಂಡಿದ್ದಾರೆ. ಬಸವರಾಜ ಮುಸಾವಳಗಿ ಫೊಟೊಗ್ರಾಫಿಕ್‌ನಲ್ಲಿ ಪಳಗಿದವರು. ಸ್ವಾತಂತ್ರ ಸಂಗ್ರಾಮವನ್ನು ನೆನಪಿಸುವ ಒಂದು ಘಟನೆಯನ್ನು (ಛಾಯಾ ಚಿತ್ರದ ಸಹಾಯದಿಂದ) ಪ್ರೌಢ ತಾಂತ್ರಿಕತೆಯ ಮೂಲಕ ಬಿಂಬಿಸಿದ್ದಾರೆ. ಗ್ರಾಮೀಣ ಮಹಿಳೆಯ ಅಭಿವ್ಯಕ್ತಿ ರಘುರಾಂ ಭೈರು ಅವರದು. ಎಚ್ಚಿಂಗ್‌ನಲ್ಲಿ ಸೂಕ್ಷ್ಮ ರೇಖೆಗಳ ಮುಖಾಂತರ ಕೃತಿ ನಿರ್ಮಾಣ ಮಾಡಿದ್ದಾರೆ. ಶಶಿಕಾಂತ ಮಾಶ್ಯಾಳ್‌ಕರ್ ''ಫೇಸ್'' ಸರಣಿಯನ್ನು ಅವಲಂಭಿಸಿ ಎಚ್ಚಿಂಗ್‌ನಲ್ಲಿ ವರ್ಣ ಮುದ್ರಣವನ್ನು ಹೊಸ ತಂತ್ರದೊಂದಿಗೆ ನಿರೂಪಿಸಲು ಪ್ರಯತ್ನ ಪಟ್ಟಿದ್ದಾರೆ. ಪರಿಸರ ನೈರ್ಮಲ್ಯವನ್ನು ಎತ್ತಿತೋರಿಸುವ ಕೃತಿ ಎಚ್.ವಿ. ಮಂತಟ್ಟಿಯವರದು. ಬೆಳೆಯುತ್ತಿರುವ ಔದ್ಯೋಗಿಕ ಕ್ರಾಂತಿಯಿಂದ ಮನುಷ್ಯ ಹೇಗೆ ಅನೈರ್ಮಲ್ಯವೆಂಬ ಚಕ್ರದಲ್ಲಿ ಸಿಲುಕಿದ್ದಾನೆ ಎಂದು ಈ ಕೃತಿ ತೋರಿಸುತ್ತದೆ. ಎಚ್ಚಿಂಗ್ ಮಾಧ್ಯಮದಲ್ಲಿ ತಾಂತ್ರಿಕತೆಗಿಂತಲೂ ವಸ್ತು ವಿಷಯಕ್ಕೆ ಕಲಾವಿದರೂ ಹೆಚ್ಚು ಮಹತ್ವ ನೀಡಿದ್ದು ಕಂಡು ಬರುತ್ತದೆ. ಶಿಲ್ಪಕಲೆಯಲ್ಲಿ

ವೀರಣ್ಣ ಕಂಬಾರ ಒಬ್ಬರೆ ಭಾಗವಹಿಸಿದ್ದು, ಕಲಾ ಶಾಲೆಯ ಪರಿಸರದಲ್ಲಿ ಆಳೆತ್ತರದ ತಾಯಿ ಹಾಗೂ ಮಗುವಿನ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಾರೆ. ಕಾವೇರಿಯನ್ನು ದೃಷ್ಟಿಯಲ್ಲಿಟ್ಟು ಇದನ್ನು ನಿರ್ಮಿಸಿದಂತೆ ಕಂಡು ಬರುತ್ತದೆ.

ಸ್ವತಂತ್ರ ಸುವರ್ಣ ಮಹೋತ್ಸವದ ಅಂಗವಾಗಿ ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಂಯುಕ್ತ ಆಶ್ರಯದಲ್ಲಿ ನೆರವೇರಿದ್ದ ಈ ಶಿಬಿರ ಕಲಬುರ್ಗಿಯ ಕಲಾವಿದರಿಗೆ ಹಾಗೂ ಕಲಾ ಪ್ರಿಯರಿಗೆ ಅಪೂರ್ವ ಅನುಭವ ನೀಡಿದೆ. ಕಲಾವಿದರಾದ ಪ್ರೊ. ವಿ. ಜಿ. ಅಂದಾನಿಯವರ ನೇತೃತ್ವ ಕಲಾ ಶಿಬಿರಕ್ಕೆ ಸ್ಫೂರ್ತಿ ಎನ್ನಬಹುದು.

ನವೋದಯ ದೈನಿಕ : 11-6-98

**ಹೆಚ್.ವಿ. ಮಂತಟ್ಟಿ**

# ಸುವರ್ಣ ಮಹೋತ್ಸವದ ನೆನಪಿನಲ್ಲಿ ವಿಜಯ ಕಲಾಮಂದಿರ ಸಂಸ್ಥೆ

ಐವತ್ತು ವರ್ಷ : ಪ್ರತಿಯೊಬ್ಬರ ಬದುಕಿನಲ್ಲಿ ಪ್ರಮುಖ ಘಟ್ಟ. ಹಾಗೆಯೇ ಸಂಸ್ಥೆಯೊಂದರ ಬೆಳವಣಿಗೆಯಲ್ಲಿ ನಾಡಿನ ಪ್ರಗತಿಯಲ್ಲೂ ಅಷ್ಟೇ ಪ್ರಮುಖವಾದದ್ದು. ನಮ್ಮ ದೇಶದ ಕಲಾಪರಂಪರೆಗೆ ಸಾವಿರಾರು ವರ್ಷಗಳ ಇತಿಹಾಸವಿದೆ. ಬ್ರಿಟಿಷ್‌ರ ದಾಸ್ಯದಲ್ಲಿದ್ದಾಗ ಕಲಾ ಪರಂಪರೆಗೆ ಬಂದೊದಗಿದ ಧಕ್ಕೆ, ಭಾರತ ಸ್ವತಂತ್ರವಾದ ನಂತರದ ಕಲಾ ಪರಂಪರೆಯ ಮಾರ್ಪಾಟುಗಳೇನು ಎಂಬುದನ್ನು ಮೇಲಕು ಹಾಕುವುದಕ್ಕೆ ಇದೊಂದು ಸುವರ್ಣ ಕಾಲ. ಮುಂಬೈಯಿಯ ಜೆ.ಜೆ. ಕಲಾ ಶಾಲೆಯಲ್ಲಿ ಬ್ರಿಟಿಷ್‌ರ ಶಿಕ್ಷಣ ಪದ್ದತಿಯಲ್ಲಿಯೇ ಕಲೆಯನ್ನು ಕಲಿತರೂ ಭಾರತೀಯ ಸಂಸ್ಕೃತಿ ಪರಂಪರೆಯ ರಕ್ತವನ್ನು ಮೈಗೂಡಿಸಿಕೊಂಡಿದ್ದ ಗದುಗಿನ ಟಿ.ಪಿ. ಅಕ್ಕಿಯವರಿಗೆ ವಿಜಯ ಕಲಾ ಮಂದಿರದ ಸ್ಥಾಪನೆಯ ಉದ್ದೇಶ ಭಾರತೀಯತೆಯನ್ನು ಮೂಡಿಸುವುದೇ ಆಗಿತ್ತು. ಸ್ವಾತಂತ್ರ್ಯ ದೊರೆತ ವರ್ಷವೇ ಅಧಿಕೃತವಾಗಿ ಸ್ಥಾಪನೆಗೊಂಡ ವಿಜಯ ಕಲಾ ಸಂಸ್ಥೆ ಅದಕ್ಕೂ ಈಗ ಸುವರ್ಣ ಮಹೋತ್ಸವ ವರ್ಷ. ಕಲಾ ಸಂಘಟನೆಯನ್ನೂ ಮೈಗೂಡಿಸಿಕೊಂಡ ಟಿ.ಪಿ. ಅಕ್ಕಿ ನಾಡಿನಾದ್ಯಂತ ಕಲಾ ಮಂದಿರ ಖ್ಯಾತಿಗಳಿಸುವ ದಿಶೆಯಲ್ಲಿ ಶ್ರಮಿಸಿದರು. ಆ ವಾರಸುದಾರಿಕೆಯನ್ನು ಚೆನ್ನಾಗಿ ಕರಗತ ಮಾಡಿಕೊಂಡ ಶ್ರೀ ಅಶೋಕ ಹಾಗೂ ಶ್ರೀ ವಸಂತ ಅವರು ಈಗ ''ಕಲಾ ಉತ್ಸವ - 98'' ನ್ನು ಅದ್ದೂರಿಯ ಸಮಾರಂಭವನ್ನಾಗಿ ಏರ್ಪಡಿಸಿದ್ದಾರೆ. ಕಲಾ ಬೆಳವಣಿಗೆಗೆ ಹೊಸದೊಂದು ತಿರುವನ್ನು ಕೊಡುವ ಉತ್ಸಾಹವೇ ಈ ಉತ್ಸವದ ಉದ್ದೇಶ.

ಕಳೆದ ಐವತ್ತು ವರ್ಷಗಳಿಂದ ಚಿತ್ರ ಕಲಾವಿದ - ಸಾಮಾನ್ಯ ಇವರ ನಡುವಿನ ಅಂತರವನ್ನು ಕಡಿಮೆಗೊಳಿಸಲು ಕಲಾ ಮಂದಿರ ನಿರಂತರ ಶ್ರಮಿಸುತ್ತಿದೆ. ಆಗಾಗ ಹಲವಾರು ಕಲಾ ಪ್ರದರ್ಶನಗಳನ್ನು, ಕಲಾ ಶಿಬಿರಗಳನ್ನು, ಕಲಾ ವಿಚಾರಸಂಕಿರಣಗಳನ್ನು ಏರ್ಪಡಿಸಿ ನಾಡಿನ ಹಿರಿಯ ಕಿರಿಯ ಕಲಾವಿದರನ್ನು ಸಮಾವೇಶಗೊಳಿಸುವದು, ರಾಷ್ಟ್ರೀಯ - ಅಂತರಾಷ್ಟ್ರೀಯ ಮಟ್ಟದ ಕಲಾವಿದರ ಪ್ರಾತ್ಯಕ್ಷತೆ, ಸ್ಲೈಡ್ಸ್ ಪ್ರದರ್ಶನಕ್ಕೆ ವೇದಿಕೆ ನಿರ್ಮಿಸಿ ಕೊಡುವದರಿಂದ ಚಿತ್ರ ಕಲಾವಿದರಲ್ಲಿ ಚಿಂತನವನ್ನು ಹಾಗೂ ಸಾಮಾನ್ಯರಲ್ಲಿ ಕಲಾ ಪ್ರಜ್ಞೆಯನ್ನು ಮೂಡಿಸುವಲ್ಲಿ ಇಂಥ ಉತ್ಸವದ ಪಾತ್ರ ನಿಜಕ್ಕೂ ಉತ್ಸಾಹದಾಯಕ.

ಸ್ವಾತಂತ್ರ್ಯ ಸಿಕ್ಕು ಐವತ್ತು ವರ್ಷಗಳು ಮುಗಿಯುತ್ತ ಬಂದರೂ ಪ್ರತಿಶತ ಕಲಾ ಪ್ರದರ್ಶನ ನೋಡುವ ಕಲಾ ಪ್ರಜ್ಞೆಯನ್ನು ಬೆಳೆಸಿಕೊಂಡವರ ಸಂಖ್ಯೆ ಇನ್ನೂ ಬಹಳ ಕಡಿಮೆ. ಕಣ್ಣಿನಿಂದ ನಾವು ನೋಡುವದೆಲ್ಲ ಕಲೆಯೇ? ಕಿವಿಯಿಂದ ಕೇಳುವ ಶಬ್ದವೆಲ್ಲ ಸಂಗೀತವೆ? ಯಾವುದರಲ್ಲಿ ಸೌಂದರ್ಯವಿದೆ, ಯಾವುದು ಸತ್ಯ? ಎಂಬುದರ ಪರಿಪೂರ್ಣ ಅರಿವು ಇನ್ನೂ ನಮ್ಮಲ್ಲಿ ಗಣನೀಯವಾಗಿ ಮೂಡಬೇಕಾಗಿದೆ. ಎಲ್ಲರ ಬದುಕು

ಶುದ್ಧವಾಗಿರಬೇಕು, ಲಯಬದ್ಧವಾಗಿರಬೇಕು, ನಿಜವಾದ ಸೌಂದರ್ಯ ಪ್ರಜ್ಞೆಯಿಂದ ಕೂಡಿರಬೇಕಾದರೆ ಇಂತಹ ಕಲಾ ಉತ್ಸವಗಳಲ್ಲಿ ಪ್ರತಿ ಸಾಮಾನ್ಯನು ಪಾಲ್ಗೊಳ್ಳಬೇಕು, ತಿಳುವಳಿಕೆಯುಳ್ಳವರು ತಿಳಿಸುವ, ತಿಳಿದುಕೊಂಡಿರುವವರು ಚಿಂತನಗೊಳ್ಳುವ ಉತ್ಸವಗಳು ಏರ್ಪಟ್ಟಾಗಲೇ ಕಲಾ ಉತ್ಸವದ ಸಾರ್ಥಕತೆ.

ಕಲಾವಿದ, ತನ್ನಷ್ಟಕ್ಕೆ ತಾನು ಬರೀ ಚಿತ್ರಗಳನ್ನು ಚಿತ್ರಿಸುತ್ತ ಹೋಗುವದು, ಸಾಮಾನ್ಯ ಇತ್ತ ಕಡೆ ಹೊರಳಿಯೂ ನೋಡದೇ ತನ್ನಷ್ಟಕ್ಕೆ ತಾನು ಹೋಗುವುದರಿಂದ ಯಾವ ಕಲಾ ಬೆಳವಣಿಗೆಯೂ ಸಾಧ್ಯವಾಗುವುದಿಲ್ಲ. ಒಬ್ಬ ಕಲಾವಿದ ಚಿತ್ರಗಳನ್ನು ಚಿತ್ರಿಸುವುದು ತನ್ನ ಅಭಿರುಚಿ ಹವ್ಯಾಸಕ್ಕಾಗಿ ಎಂದು ಗೊಣಗಲೂಬಾರದು, ಒಂದು ಕಲಾಕೃತಿ, ಕಲಾವಿದ ಮತ್ತು ಶ್ರೀ ಸಾಮಾನ್ಯ ಬೆರೆಯುವದಕ್ಕೆ ಕೊಂಡಿಯಾಗಿರಬೇಕು. ಸಾಮಾನ್ಯನ್ನು ಅಸಮಾನ್ಯತೆಗೆ ಕೊಂಡೊಯ್ಯಬೇಕು ಅಂದಾಗ ಕಲಾವಿದ ಮತ್ತು ಸಾಮಾನ್ಯನ ನಡುವಿರುವ ಅಂತರ ಅಥವಾ ಕಂದಕ ಕಡಿಮೆಗೊಳ್ಳುತ್ತದೆ.

ಈ ದಿಶೆಯಲ್ಲಿ ವಿಜಯ ಕಲಾ ಮಂದಿರ ಸಂಸ್ಥೆ ಅಮೂರ್ತ, ನವ್ಯ, ಇಸಂಗಳಂಥ ಕಲಾ ಕೃತಿಗಳನ್ನು ಕಡಿಮೆಗೊಳಿಸಿ ಈ ಸಲ ಸಾಮಾನ್ಯನನ್ನೂ ಕಲಾ ಲೋಕದ ಒಳಗೆ ಬರಮಾಡಿಕೊಳ್ಳುವ ದಿಶೆಯಲ್ಲಿ, ಶಿಲ್ಪ ಕಲಾ ಶಿಬಿರ, ಭಾವಚಿತ್ರ ಶಿಬಿರ, ಅಪ್ಲೈಡ ಕಲಾ ಶಿಬಿರ, ಯುವ ಪ್ರತಿಭಾವಂತ ಕಲಾವಿದರ ಕಲಾ ಪ್ರದರ್ಶನ ಹಾಗೂ ಕಲಾ ವಿಚಾರ ಸಂಕಿರಣಗಳಂಥ ಕಾರ್ಯಕ್ರಮಗಳನ್ನು ಯೋಜಿಸಿದೆ. ಸುವರ್ಣ ಮಹೋತ್ಸವ ವರ್ಷದ ಎರಡನೇ ಅದ್ದೂರಿ ಕಲಾ ಉತ್ಸವವನ್ನಾಚರಿಸುತ್ತಿರುವ ವಿಜಯ ಕಲಾ ಮಂದಿರ ಸಂಸ್ಥೆ ನಿಜವಾಗಿಯೂ ಪ್ರಶಂಸನೀಯ. ಭಾರತೀಯ ನೇತಾರರನ್ನು, ಸ್ವಾತಂತ್ರ್ಯ ಹೋರಾಟಗಾರರನ್ನು ಚಿತ್ರಿಸಿ, ಪ್ರದರ್ಶಿಸುವ ಇಲ್ಲಿಯ ಎಲ್ಲ ಕಲಾ ಕೃತಿಗಳನ್ನು ನೋಡಲು ಗದುಗಿನ ಜನತೆ ಸಕ್ರಿಯವಾಗಿ ಪಾಲ್ಗೊಂಡು ಕಲಾ ಪರಂಪರೆಯ ಸಂಸ್ಕೃತಿ ನಿರ್ಮಾಣಕ್ಕೆ ಕಾರಣವಾಗಬೇಕೆಂದು ಈ ಮೂಲಕ ವಿನಂತಿಸಿಕೊಳ್ಳುತ್ತೇನೆ.

ನವೋದಯ : 11.8.98

**ಅನ್ನದಾನಿ ಹಿರೇಮಠ**

# ಧಾರವಾಡದಲ್ಲಿ ಜರುಗಿದ ಗ್ರಾಫಿಕ್ ಕಲಾವಿದರ ಶಿಬಿರ

ಗ್ರಾಫಿಕ್ (ಮುದ್ರಣ) ಕಲೆಯಲ್ಲಿ ರೇಖೆ, ಸಂಯೋಜನೆ, ವರ್ಣ ವಿನ್ಯಾಸಗಳು ಪ್ರಮುಖ ಪಾತ್ರ ವಹಿಸಿವೆ. ಆಧುನಿಕ ಮುದ್ರಣ ಯಂತ್ರಗಳಿಗೆ ಸ್ಫೂರ್ತಿದಾಯಕವಾಗಿರುವ ಈ ಕಲೆ ಇಂದು ತನ್ನ ವಿಶ್ವಾದ್ಯಂತ ಕಲಾವಿದರಿಗೆ ವರವಾಗಿ ಪರಿಶ್ರಮಿಸುತ್ತಾ ಇದೆ.

ಗ್ರಾಫಿಕ್ ಹಲವಾರು ವಿಧಾನಗಳನ್ನು ಒಳಗೊಂಡಿದೆ. ಲಿಥೋಗ್ರಾಫ್, ಇಂಟ್ಯಾಗ್ಲೀಯೋ, ಎಚ್ಚಿಂಗ, ಎನ್ ಗ್ರೇವಿಂಗ್ ಮತ್ತು ಡ್ರ್ಯಾಂಟ್ ಪಾಯಿಂಟ್ ಉಡ್‌ಕಟ್ ಹಾಗೂ ಲೀನೊಕಟ್ ಇತ್ಯಾದಿ ಇನ್ನಿತರ ವಿಧಾನಗಳಿಂದ ಮುದ್ರಣಕಲೆ ರೂಪಿತಗೊಂಡಿದೆ.



ಈ ಕಲೆ ಚೀನಾ, ಜಪಾನ್ ದೇಶಗಳಲ್ಲಿ ಕ್ರಿ.ಶ. 9ನೇ ಮತ್ತು 19ನೇ ಶತಮಾನದ ಹಿಂದೆ ಪ್ರಾರಂಭಗೊಂಡು ಇಂದಿಗೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ.

ಇತ್ತೀಚೆಗೆ ಧಾರವಾಡದಲ್ಲಿ ಅಕಾಡೆಮಿ ಆಫ್ ಕ್ರಿಯೇಟಿವ್ ಗ್ರಾಫಿಕ್ಸ್ ಮತ್ತು ಡಿ.ವಿ. ಹಾಲಭಾವಿ ಲಲಿತಕಲಾ ಮಹಾ ವಿದ್ಯಾಲಯ ಜತೆಗೂಡಿ ನಾಲ್ಕು ದಿನಗಳವರೆಗೆ ಹುಬ್ಬಳ್ಳಿ-ಧಾರವಾಡ ಕಲಾ ಶಾಲೆಗಳ ಕಲಾ ವಿದ್ಯಾರ್ಥಿಗಳಿಗೆ ಗ್ರಾಫಿಕ್ ಕ್ಯಾಂಪ್ (ಗ್ರಾಫಿಕ್ ಶಿಬಿರ)ನ್ನು ಏರ್ಪಡಿಸಿದ್ದರು.

ಕಲಾ ಮಹಾವಿದ್ಯಾಲಯದ ಉಪನ್ಯಾಸಕರು, ಗ್ರಾಫಿಕ್ ಕಲಾವಿದರಾಗಿರುವ ಎಸ್.ಎಮ್. ಲೋಹಾರ ಅವರು ಈ ಶಿಬಿರದ ಸಂಚಾಲಕರಾಗಿ ಶಿಬಿರಾರ್ಥಿಗಳಿಗೆ ಗ್ರಾಫಿಕ್ ಕಲೆಯ ಬಗ್ಗೆ ಹೆಚ್ಚಿನ ಮಾಹಿತಿ, ಸಂಯೋಜನೆ, ಕೆತ್ತನೆ ರೀತಿ, ಮುದ್ರಣ ತಂತ್ರಜ್ಞಾನ, ವರ್ಣವಿನ್ಯಾಸ ಕುರಿತು ತರಬೇತಿ ನೀಡಿದರು.

ಶಿಬಿರದಲ್ಲಿ ಬಳಸಿಕೊಂಡಿದ್ದು ಲೀನೋಕಟಂಗ್ ಮಾತ್ರ. ಶಿಬಿರಾರ್ಥಿಗಳ ಕೃತಿಗಳಲ್ಲಿ ಭಾವಚಿತ್ರ, ವಿವಿಧ ವಿಷಯಗಳನ್ನೊಳಗೊಂಡ ಗ್ರಾಫಿಕ್ ಮುದ್ರಣದಲ್ಲಿ ವಸ್ತು ಸ್ಥಿತಿ, ಸರಳತೆಯಿಂದ ಪರಿಪೂರ್ಣಗೊಂಡಿತ್ತು. ಒಟ್ಟಿನಲ್ಲಿ ಸೃಜನಾತ್ಮಕತೆಯಿಂದ ಕೂಡಿದ್ದವು.

ಈ ಹಿಂದೆ ಕರ್ನಾಟಕ ಲಲಿತಾಕಲಾ ಅಕಾಡೆಮಿ, ಇತರೆ ಕಲಾ ಸಂಸ್ಥೆಗಳಿಂದಲೂ ಇಂಥ ಗ್ರಾಫಿಕ್ ಶಿಬಿರಗಳನ್ನು ಏರ್ಪಡಿಸಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಈ ಮುದ್ರಣ ಕಲೆಯ ಕುರಿತು ಸಾಮಾನ್ಯ ಜನತೆಗೂ ಕಲಾಭಿಮಾನಿಗಳಿಗೂ ಅರ್ಥಪೂರ್ಣವಾಗಿ ತಿಳಿಯುವಂತೆ ಶಿಬಿರಗಳು ಏರ್ಪಾಡು ಆದರೆ ಈ ಮುದ್ರಣ ಕಲೆಯ ಇತಿಹಾಸ ಎಷ್ಟು ಇದೆ ಎಂಬುದನ್ನು ತಿಳಿಸಿ ಕೊಟ್ಟಂತಾಗುವುದು.

ಈ ಶಿಬಿರದಲ್ಲಿ ಎಸ್. ಎಮ್. ಪಾಟೀಲ, ವಸಂತ ಕುಮಾರ, ಸದಾನಂದ ಹೆಗಡೆ, ಗೋಪಾಲ, ಎಂ. ಬಿ. ಗಣೇಶಗುಡಿ, ಕೃಷ್ಣಮೂರ್ತಿ, ಶಿವರಾಮ, ಬಿರಾದಾರ, ಬಿ. ಬಿ. ಕಣವಿ, ಪಿ. ವಿ. ಕನ್ನಯಾಳ, ದೀಪಾ, ಕು. ಹಿರೇಮಠ ಇತರೆ ಒಟ್ಟು 20 ವಿದ್ಯಾರ್ಥಿಗಳು ಭಾಗವಹಿಸಿದ್ದರು.



ಈ ಗ್ರಾಫಿಕ್ ಕಲೆಯ ಹೆಚ್ಚಿನ ತರಬೇತಿ, ಮಾಹಿತಿ, ಹಾಗೆ ವಿವಿಧ ಮಾಧ್ಯಮಗಳ ಮುದ್ರಣ ತಂತ್ರಜ್ಞಾನ ಪಡೆಯಲೆಂದು ಈಗಿನ ನಮ್ಮ ಖ್ಯಾತ ಕಲಾವಿದರು, ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷರು ಆಗಿರುವ ಪ್ರೊ. ವಿ. ಜಿ. ಅಂದಾನಿಯವರ ಪ್ರಯತ್ನದಿಂದ ಧಾರವಾಡದ ಸರಕಾರಿ ಆರ್ಟ್ ಗ್ಯಾಲರಿ ಆವರಣದಲ್ಲಿ ಅಕಾಡೆಮಿ ವತಿಯಿಂದ ಒಂದು ಗ್ರಾಫಿಕ್ ಆರ್ಟ್ ಸ್ಟುಡಿಯೋ ಅಸ್ತಿತ್ವಕ್ಕೆ ಬರಲಿದ್ದು, ಇದು ಉತ್ತರ ಕರ್ನಾಟಕದ ಎಲ್ಲ ಕಲಾವಿದರಿಗೆ ಕೊಡುಗೆಯಾಗಿ ಸಿಗಲಿದೆ. ಇದೇ ರೀತಿ ಉತ್ತರ-ಹೈದ್ರಾಬಾದ್ ಕರ್ನಾಟಕದ ವಿಭಾಗಕ್ಕೆ ಅಕಾಡೆಮಿಯಿಂದ ಕಾರ್ಯಕ್ರಮಗಳ ಸೌಲಭ್ಯ ದೊರೆಯಲೆಂದು ಕಲಾವಿದರ ಆಸೆ.

## ಕಲಾ ಪ್ರದರ್ಶನ

ಭಾರತ ಸ್ವರ್ಣ ಜಯಂತಿ (ಮುಕ್ತಾಯ) ವರ್ಷಾಚರಣೆ ನಿಮಿತ್ಯ ಧಾರವಾಡ ನಗರದ ಕಲಾವಿದರು ಹಾಗೂ ಕರ್ನಾಟಕ ಲಲಿತ ಕಲಾ ಅಕಾಡೆಮಿ ಸಹಯೋಗದಲ್ಲಿ ಕಲಾವಿದರ ಕಲಾಪ್ರದರ್ಶನೊಂದನ್ನು ನಗರದ ಸರಕಾರಿ ಆರ್ಟ್ ಗ್ಯಾಲರಿಯಲ್ಲಿ ಏರ್ಪಡಿಸಲಾಗಿತ್ತು.

ಸಮಕಾಲೀನ ನವ್ಯಕೃತಿಗಳ ಸಮೂಹ ಪ್ರದರ್ಶನದಲ್ಲಿ ಹಿರಿಯ ಖ್ಯಾತ ಕಲಾವಿದರು ಅಲ್ಲದೆ ಯುವ ಕಲಾವಿದರು ಜತೆ ಸೇರಿದ ಈ ಕಲಾ ಪ್ರದರ್ಶನದಲ್ಲಿ ಬೆಂಗಳೂರಿನ ಆರ್. ಎಮ್. ರಾಮಚಂದ್ರನ್, ಪಿ. ಜಿ. ನಾಯಕ (ಶಿರಸಿ), ಬೆಳಗಾವಿಯ ಸುಧಾ ಮಂಟೂರ, ಬಿಜಾಪುರದ ಎಂ. ಬಿ. ಪಾಟೀಲ, ರಾಯಚೂರಿನ ಎಂ. ಕೃಷ್ಣ,

ಕಾಸರಗೋಡಿನ ಡಿ.ಎಸ್.ದೇಸಾಯಿ, ಬೆಳಗಾವಿಯ ಅನೀಲ ಪ್ರಕಾಶ್, ಗುಲಬರ್ಗಾದ ಶೇಷಿರಾವ್ ಬಿರಾದಾರ್, ಪ್ರಸಾದ, ದಾವಣಗೆರೆಯ ವೈ.ಎಚ್. ಸುರೇಶ್ ಹಾಗೂ ಚಂದ್ರನಾಥ ಇವರೆಲ್ಲರ ಸೃಜನಾತ್ಮಕ ಸಮಕಾಲೀನ ನವ್ಯ ಕೃತಿಗಳ ಸಮೂಹ ಪ್ರದರ್ಶನದಲ್ಲಿ ಕೃತಿಗಳು ಗಂಭೀರ ಭಾವನೆಯನ್ನು ವ್ಯಕ್ತಪಡಿಸುವಂತಿದ್ದವು.

ರಾಮಚಂದ್ರನ್ ತಮ್ಮ ಕೃತಿಯಲ್ಲಿ ಮಹಿಳೆಯ ವಿಷಯಾಧರಿಸಿ ಚಿತ್ರಿಸಿದ್ದಾರೆ. ಅಲ್ಲಲ್ಲಿ ಕ್ಯಾನ್‌ವಾಸ್‌ನ್ನು ಉಳಿಸಿಕೊಂಡಿದ್ದಾರೆ. ಸುಧಾ ಮಂಟೂರ ಅವರ ಕೃತಿಯಲ್ಲಿ ಮಹಿಳೆ ಮತ್ತು ಪರಿಸರಕ್ಕೆ ಹತ್ತಿರವಾದ ವಿಷಯವನ್ನೇ ಆಯ್ದುಕೊಂಡಿದ್ದಾರೆ. ಎಂ. ಬಿ. ಪಾಟೀಲರ ಕೃತಿಯು ಇಂಪ್ರೆಷನಿಜಂ ಶೈಲಿಯಲ್ಲಿ ಅತಿ ಸಾಮಾನ್ಯ ಜನರ ಜೀವನ ಆಯ್ದುಕೊಂಡಿದ್ದು ವರ್ಣ ವಿನ್ಯಾಸವು ಉತ್ತಮವಾಗಿದೆ. ಎಂ. ಕೃಷ್ಣ ಅವರದು ಬುದ್ಧನ ಜೀವನ ಕುರಿತದ್ದಾಗಿದೆ.

ಪೊಂಚತಾಯ್ ಅವರ ಕೃತಿಯು ನಿಸರ್ಗ ಚಿತ್ರ (ಲ್ಯಾಂಡಸ್ಕೇಪ್)ವನ್ನು ಎಕ್ಸ್‌ಪ್ರೆಷ್‌ನಿಸಂ ಶೈಲಿಯಲ್ಲಿ ಅತ್ಯುತ್ತಮ ವರ್ಣವಿನ್ಯಾಸ. ಆ ಕುಂಚದ ವೇಗ, ಸ್ಟ್ರೋಕ್ ಉತ್ತಮ ಪರಿಣಾಮಕಾರಿಯಾಗಿ ಆಕರ್ಷಕವಾಗಿ ಕೃತಿಯಲ್ಲಿ ಮೂಡಿಬಂದಿದೆ. ವರ್ಣೇಕರ ಅವರ ನಿಸರ್ಗ ದೃಶ್ಯದ ತಾವರೆ ಕೃತಿ ಸರಳವಾಗಿ ಮೂಡಿ ಬಂದಿದೆ.

ಗುಲಬರ್ಗಾದ ಶೇಷಿರಾವ್‌ಬಿರಾದಾರ್ ಅವರ ಕೃತಿಯಲ್ಲಿ ಮಾನವನ ಶಿರಸ್ಸನ್ನು ಉಪಯೋಗಿಸಿ ತಮ್ಮ ಶೈಲಿಯಲ್ಲಿ ಚಿತ್ರಿಸಿಕೊಂಡಿದ್ದಾರೆ. ಪ್ರಸಾದ ಅವರ ಪಿರಾಮಿಡ್ ಕೃತಿಯಲ್ಲಿ ಪ್ರಥಮ, ದ್ವಿತೀಯ ವರ್ಗದ ವರ್ಣಗಳನ್ನು ಬಳಸಿಕೊಂಡಿದ್ದಾರೆ. ಪಿ.ಜಿ.ನಾಯಕ ಅವರ ಅಬ್‌ಸ್ಟ್ರಾಕ್ಟ್ ಶೈಲಿ ಮತ್ತು ವರ್ಣ ಸಂಯೋಜನೆಯು ಫಲಕಾರಿಯಾಗಿದೆ.

ಚಂದ್ರನಾಥ ಅವರ ಕಲಾಕೃತಿಯಲ್ಲಿ ಅಸ್ತಿಪಂಜರವು ಅನಾಥವಾಗಿ ಮಲಗಿರುವ ದೃಶ್ಯದಲ್ಲಿ ರೇಖೆ, ಕುಂಚದ ಸೆಳೆತ, ಅಲ್ಪಭಾಗದಲ್ಲಿ ವರ್ಣ ಬಳಸಿಕೊಂಡು ಎಕ್ಸ್‌ಪ್ರೆಷ್‌ನಿಸಂ ಶೈಲಿಯನ್ನು ಬಳಸಿಕೊಂಡಿದ್ದಾರೆ. ವೈ.ಎಚ್. ಸುರೇಶ ಅವರ ಕೃತಿಯಲ್ಲಿ ಸಾಂಕೇತಿಕವಾಗಿ ಲಿಂಗ, ಸೂರ್ಯ, ಚಂದ್ರ, ಭೂಮಿ ಇವುಗಳನ್ನು ಸಂಯೋಜಿಸಿ ಪ್ರಥಮ ದ್ವಿತಿಯ ವರ್ಗದ ವರ್ಣ ವಿನ್ಯಾಸದೊಂದಿಗಿನ ಕೃತಿಯನ್ನು ಕಾಣಬಹುದು. ಹೆಚ್ಚಿನ ಕೃತಿಗಳಲ್ಲಿ ಮಹಿಳೆ ಮತ್ತು ಪರಿಸರ (ನಿಸರ್ಗ)ಕ್ಕೆ ಸಂಬಂಧಿಸಿದ ಕೃತಿಗಳು ಕಂಡು ಬಂದಿವೆ. ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಸುಸಂದರ್ಭ ಸಮಾರಂಭಕ್ಕೆ ಈ ಪ್ರದರ್ಶನವು ಕಲಾವಿದರ ಕೊಡುಗೆಯಾಗಿತ್ತು.

ಸಂಜೆವಾಣಿ : 6.9.98

**ವಿಜಯಾನಂದ ಬಿ. ಕಾಲವಾಡ**

# ವಿರೂಪಗೊಂಡ ರೂಪಗಳ ಮೂಲಕ ವ್ಯಾಕುಲತೆ, ಖಿನ್ನತೆ

ಕಲಾಕೃತಿಗಳು ಎಂದರೆ ನೇತ್ರಾನಂದಕರವಾದದ್ದು ಮಾತ್ರ ಎಂಬ ನಂಬಿಕೆ ಕೆಲವರಲ್ಲಿ ಇದೆ. ಆದರೆ ಕಲಾಕೃತಿಯೊಂದು 'ನೇತ್ರಾನಂದಕರ'ವಾಗಿಯೇ ಇರಬೇಕಿಲ್ಲ. ವಿಕೃತಿ, ವಿರೂಪಗಳೂ ಅದರ ಮುಖ್ಯ ಗುಣಲಕ್ಷಣವಾಗಬಹುದು. ಪ್ರಸ್ತುತ ಬೆಂಗಳೂರಿನಲ್ಲಿ ನಡೆದಿರುವ ಅಮಿತಾವದಾಸ್ ಅವರ ಕೃತಿಗಳ ಪ್ರದರ್ಶನವು ವಿಕೃತಿ, ವಿರೂಪಗಳೂ ಅಭಿವ್ಯಕ್ತಿಯ ಮುಖ್ಯ ಪರಿಕರವೆಂಬುದನ್ನು ಸಾಬೀತು ಪಡಿಸುತ್ತದೆ.

ದೆಹಲಿಯ ಅಮಿತಾವ ದಾಸ್ ಅವರು ನವದೆಹಲಿಯ ಕಾಲೇಜ್ ಆಫ್ ಆರ್ಟ್‌ನಲ್ಲಿ ಕಲಾಭ್ಯಾಸ ಮಾಡಿದವರು. ಪ್ರದರ್ಶನ ಮತ್ತು ಗ್ರಾಫಿಕ್ ವಿನ್ಯಾಸದಲ್ಲಿ ಫೆಡರಲ್ ರಿಪಬ್ಲಿಕ್ ಆಫ್ ಜರ್ಮನಿಯ ಫೆಲೋಶಿಪ್ ಪಡೆದ ಇವರು 1976ರಲ್ಲಿ ರಾಷ್ಟ್ರೀಯ ಪ್ರಶಸ್ತಿಯನ್ನೂ ಪಡೆದಿದ್ದಾರೆ. ನಮ್ಮ ಸಂದರ್ಭದಲ್ಲಿ ಗಮನಾರ್ಹರಾದ ಕಲಾವಿದರಲ್ಲಿ ಒಬ್ಬರಾದ ಇವರ ಕೃತಿಗಳ ಪ್ರದರ್ಶನವು ಇದೀಗ ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ನಡೆಯುತ್ತಿದೆ. ಈ ಪ್ರದರ್ಶನದಲ್ಲಿ ಇವರ ವರ್ಣಚಿತ್ರಗಳು ಹಾಗೂ ರೇಖಾ ಚಿತ್ರಗಳನ್ನು ಪ್ರದರ್ಶಿಸಲಾಗಿದೆ. ಸುಮಾರು ಎರಡು ದಶಕಗಳ ಅವಧಿಯಲ್ಲಿ ರಚಿಸಲ್ಪಟ್ಟ ಇವರ ಕೆಲವು ಪ್ರಾತಿನಿಧಿಕ ಕೃತಿಗಳು ಇಲ್ಲಿವೆಯಾದರೂ ಇವು ಬಹುತೇಕ ಚಿಕ್ಕ ಅಳತೆಯ ಕೃತಿಗಳು.

ಅಮಿತಾವ ದಾಸ್ ಸುಮಾರು ಒಂದೆರಡು ದಶಕಗಳಿಂದ ವಿಶಿಷ್ಟ ಶೈಲಿಯ ಕೃತಿಗಳ ಮೂಲಕ ಕಲಾವಲಯದಲ್ಲಿ ತಮ್ಮ ಛಾಪು ಮೂಡಿಸಿದ್ದಾರೆ. ವಾಸ್ತವೇತರ ರೀತಿಯಲ್ಲಿನ ವಿಶಿಷ್ಟ ಶೈಲಿಯೇ ಇವರ ಕೃತಿಗಳ ಮುಖ್ಯ ಬಿಂದುವಾಗಿದೆ. ಈ ಪ್ರದರ್ಶನದಲ್ಲಿರುವ ಕೃತಿಗಳೆಲ್ಲ ಅವರ ಈ ಛಾಪಿನಿಂದ ಕೂಡಿದ ಕೃತಿಗಳೇ ಆಗಿವೆ. ಇಲ್ಲಿ ವೈವಿಧ್ಯ ಮನೆ ಮಾಡಿದ್ದರೂ ಅದು ಸಮತಟ್ಟಾದ ಹಿನ್ನೆಲೆ ಹಾಗೂ ವಿರೂಪಗೊಂಡ ಸರಳ ಆಕೃತಿಗಳ ಸುತ್ತವೇ ನಡೆದಿದೆ. ಅಂದರೆ ತಮ್ಮ ಅನಿಸಿಕೆಗಳನ್ನು ತುಂಬ ಸರಳ ರೀತಿಯಲ್ಲಿ ಹೇಳುವ ವಿಧಾನ ಇವರದ್ದು. ಅಂದರೆ ಪ್ರತಿಯೊಂದು ಕೃತಿಯಲ್ಲೂ ಸೀಮಿತವಾಗಿ ಒಂದೆರಡು ಆಕೃತಿಗಳನ್ನು ಮಾತ್ರ ಇಟ್ಟು ಕೃತಿಯಲ್ಲಿ ಅದಕ್ಕೆ ಆದ್ಯತೆ ಬರುವ ನಿರ್ವಹಣೆ ಇವರದ್ದು. ಆದರೆ ಈ ಪ್ರದರ್ಶನದಲ್ಲಿ ಸರಳತೆಯ ನಡುವೆ ಸಂಕೀರ್ಣ ಕೃತಿಗಳೂ ಇವೆ. ಆರಂಭದಲ್ಲಿ ಸರಳತೆಗೇ ಆದ್ಯತೆಯಿದ್ದ ಇವರ ಕೃತಿಗಳಲ್ಲಿ ಈಚೆಗೆ ಸ್ವಲ್ಪ ಸಂಕೀರ್ಣತೆಯೂ ಬಂದಿದೆ.

ಅನುಭವವೇ ಮುಖ್ಯವಾಗುಳ್ಳ ಇವರ ಕೃತಿಗಳಲ್ಲಿ ಅರ್ಥ ಹುಡುಕಲು ಹೊರಟರೆ ಇವು ಸುಲಭವಾಗಿ ನಮಗೆ ಅದನ್ನು ಬಿಟ್ಟುಕೊಡುವುದಿಲ್ಲ. ಹೀಗೆ ನಿರ್ದಿಷ್ಟ ಅನುಭವಕ್ಕೆ ಸೀಮಿತವಲ್ಲದ ಇವನ್ನು ನಮ್ಮ ಬದುಕಿನ ನೇತ್ಯಾತ್ಮಕ ಅಂಶಗಳೊಂದಿಗೆ ಹೋಲಿಸಿ ನೋಡಬಹುದಾದರೂ ಇವು ಉದ್ದಿಶ್ಯಪೂರ್ವಕವಾಗಿ ಆ ತೀವ್ರತೆಯನ್ನು ನಿರಾಕರಿಸುತ್ತವೆ. ಹಾಗಾಗಿ ಇಲ್ಲಿರುವುದು ಬಹುತೇಕ ಮೌನ ಅಭಿವ್ಯಕ್ತಿ. ವಿವಿಧ ಸಮಕಾಲೀನ ಸಂದರ್ಭದ ಖಿನ್ನತೆಯನ್ನು ಅಭಿವ್ಯಕ್ತಿಸುವ ಇವುಗಳಲ್ಲಿ ಹಲವು ಸಂಕೇತಗಳನ್ನೂ ಈ ಕಲಾವಿದ ಬಳಸಿಕೊಳ್ಳುತ್ತಾರೆ.

ವ್ಯಕ್ತಿ, ಪ್ರಾಣಿ, ವಸ್ತುಗಳ ಒಟ್ಟು ದ್ರವ್ಯರಾಶಿಯ ಆಕಾರವನ್ನು ಇಟ್ಟುಕೊಂಡು ಅದರೊಳಗೆ ಎಲುಬಿನ ಹಂದರದಂತೆ ವಾಸ್ತವೇತರ ರೀತಿಯಲ್ಲಿ ಆ ಆಕೃತಿ ಯಾವುದೆಂಬುದರ ಸೂಚನೆ ನೀಡುತ್ತಾರೆ. ವಿವಿಧ ಬಗೆಯ ರೇಖಾಕೃತಿಗಳು, ಕುಂಚದ ಬೀಸುಗಳ ಮೂಲಕ ಹೀಗೆ ಮಾಡುವಾಗ ಅಲ್ಲಿನ ವಿವರಗಳನ್ನೆಲ್ಲ ನಿರಾಕರಿಸಿ ಒಟ್ಟು ಭಾವಕ್ಕೆ ಆದ್ಯತೆ ನೀಡುತ್ತಾರೆ. ಅಂತೆಯೇ ಆಕೃತಿಯೊಂದು ಕುದುರೆಯಂತೆ ಕಂಡರೂ ಅದನ್ನು 'ಅನಿಮಲ್ ಫಾರ್ಮ್' ಎಂದು ಕರೆಯುತ್ತಾರೆಯೇ ಹೊರತು ಕುದುರೆ ಎಂದು ಸ್ಪಷ್ಟವಾಗಿ ಹೇಳುವುದಿಲ್ಲ. ಇದರಂತೆಯೇ ವ್ಯಕ್ತಿಗಳು, ಪಕ್ಷಿಗಳು, ಮರಗಳು ಮುಂತಾದ ಸಂದರ್ಭಗಳಲ್ಲೂ ಅವುಗಳನ್ನು ಒಂದು ವರ್ಗೀಕೃತ ಗುಂಪಾಗಿ ನೋಡುವ ವಿಧಾನ ಇವರದ್ದು.



ಅಮಿತಾಬ್ ದಾಸ್‌ರವರ 'ಎನಿಮಲ್ ಫಿಗರ್'

ದಾಸ್ ಅವರ ಕೃತಿಗಳ ಇನ್ನೊಂದು ವೈಶಿಷ್ಟ್ಯವೆಂದರೆ ಆಕೃತಿಗಳನ್ನು ಹಲವೆಡೆ ಅಂಗಚ್ಛೇದಗೊಳಿಸಿ ಒಂದಕ್ಕೊಂದು ಅಂಟಿಕೊಂಡಿಲ್ಲದ ಆಕೃತಿಗಳಂತೆ ಪಕ್ಕ ಪಕ್ಕದಲ್ಲಿಡುತ್ತಾರೆ. ಜೊತೆಗೆ ನೆರಳು-ಬೆಳಕಿನ ಯೋಜನೆ, ದೃಗ್ದರ್ಶನ ಎಲ್ಲವನ್ನೂ ನಿರಾಕರಿಸಿ ಅವುಗಳನ್ನು ಸಮತಟ್ಟಾಗಿ ರೂಪಿಸಿರುತ್ತಾರೆ. ಹೀಗೆ ಇವುಗಳೆಲ್ಲ ನಮಗೆ ಅನೂಹ್ಯ ಲೋಕದ ವಿಚಿತ್ರ ಪ್ರಾಣಿಗಳಾಗಿ ಕಂಡುಬರುತ್ತವೆ. ಹಾಗಿದ್ದರೂ ಇಲ್ಲಿ ಬಹುತೇಕ ಜನಪದೀಯ, ಆದಿಮ ಕಲೆಯ ಪ್ರೇರಣೆ ಕಂಡುಬಂದರೂ ಕೆಲವೆಡೆ ಪಾಶ್ಚಾತ್ಯ ಕಲೆಯ ಪ್ರಭಾವ ಕಂಡು ಬರುತ್ತದೆ. ಕೃತಿ ಸಂಖ್ಯೆ 11ರಲ್ಲಿ ರವೀಂದ್ರನಾಥ ಠಾಗೂರರ ಕೃತಿಗಳ ನೆನಪು ಬರುತ್ತದೆ. ಹೀಗೆ ಈ ಸರಳ ಕೃತಿಗಳಲ್ಲಿನ ಅನನ್ಯ ಶೈಲಿಯ ನಡುವೆಯೂ ವಿವಿಧ ಕಾಲಘಟ್ಟಗಳ ಕಲೆಗಳ ನೆನಪು ಇಲ್ಲಿ ನಮಗೆ ಬರುತ್ತದೆ.

ಅಮಿತಾವದಾಸ್ ಇವರ ಬಹುತೇಕ ಕೃತಿಗಳಲ್ಲಿ ಮುಖ್ಯವಾಗಿ ಎರಡು ಪಾತಳಿಗಳು ಕಂಡುಬರುತ್ತವೆ. ಅದರಲ್ಲೊಂದು ಹಿನ್ನೆಲೆಯಾದರೆ ಇನ್ನೊಂದು ಮುಖ್ಯ ಆಕೃತಿಗಳದ್ದು. ಕೆಲವೆಡೆ ಹಿನ್ನೆಲೆಯಲ್ಲಿ ವೈವಿಧ್ಯಮಯ ಮೈವಳಿಕೆಯಿದ್ದರೆ ಆ ಹಿನ್ನಲೆಯ ಮೇಲೆ ತೇಲುತ್ತಿರುವಂತೆ ಮುಖ್ಯ ವಸ್ತುಗಳ ಸುತ್ತ ಅಗತ್ಯ ಸನ್ನಿವೇಶ ನಿರ್ಮಾಣ ಮಾಡದೇ ಕೃತಿಯನ್ನು ಸರಳವಾಗಿಸುವುದು ಇದರ ವೈಶಿಷ್ಟ್ಯ.

ದಾಸ್ ಅವರ ಕೃತಿಗಳಲ್ಲಿ ರೇಖಾ ಪ್ರಧಾನವಾದ ರಚನೆಗಳು ಸಾಕಷ್ಟಿವೆ. ರವೀಂದ್ರನಾಥ ಠಾಗೂರರು ಡೂಡ್ಲಿಂಗ್‌ನಂತೆ ತಮ್ಮ ಕೃತಿಗಳನ್ನು ಬೆಳೆಸಿದ್ದು ಇಲ್ಲಿಯೂ ಅದರ ನೆನಪು ಬರುತ್ತದೆ. ಒಂದೆರಡು ಕೃತಿಗಳಲ್ಲಿ ತುಂಬ ಸೂಕ್ಷ್ಮ ರೇಖೆಗಳನ್ನು ಬಳಸಿದ್ದರೆ ಮತ್ತೆ ಕೆಲವೆಡೆ ದಪ್ಪನೆಯ ರೇಖೆಗಳ ಮೂಲಕ ವೈವಿಧ್ಯಮಯ ಅನುಭವ ಉಂಟು ಮಾಡುತ್ತಾರೆ. ತುಂಬ ವಿಶೇಷವೆನ್ನುವಂತೆ ಒಂದೆರಡು ಸೆರಿಗ್ರಾಫ್ ಕೃತಿಗಳಲ್ಲಿ ಹೊಳೆಯುವ ಸ್ಟಿಕರ್‌ಗಳ ತುಣುಕುಗಳನ್ನು ಅಂಟಿಸಿದ್ದಾರೆ. ಹೀಗೆ ವೈವಿಧ್ಯಮಯವಾಗಿರುವ ಈ ಪ್ರದರ್ಶನದ ಮೂಲಕ ಅಮಿತಾವ ದಾಸ್ ಅವರು ನಮ್ಮನ್ನು ಮಿಸ್ಟಿಕ್ ಆವರಣಕ್ಕೆ ಒಯ್ಯುತ್ತಾರೆ. ವಿಶಿಷ್ಟ ವಾಸ್ತವೇತರ ವರ್ಣಮೇಳವೂ ಇದಕ್ಕೆ ಪೂರಕವಾಗಿದೆ.

ಒಟ್ಟಾರೆಯಾಗಿ ನಿಶ್ಚಿತ ಅರ್ಥಕ್ಕೆ ಜೊತು ಬೀಳದೆ ಖಿನ್ನತೆ, ವಿಷಾದದ ಅನುಭವಗಳ ಮೂಲಕವೇ ನಮ್ಮನ್ನು ತಲುಪಬಯಸುವ ಇವು ಕಲಾತ್ಮಕವಾಗಿ ಉನ್ನತ ಹಂತದಲ್ಲಿವೆ.

ಪ್ರಜಾವಾಣಿ : 14.11.98

ಚಿ.ಸು. ಕೃಷ್ಣಸೆಟ್ಟಿ

# ಸ್ತ್ರೀ ಸಂವೇದನೆಯ ಭಾವಾಭಿವ್ಯಕ್ತಿ

ರಾಜ್ಯದ ಅನೇಕ ಕಲಾ ಶಾಲೆಗಳಲ್ಲಿ ಇಂದಿಗೂ ವ್ಯಾಸಂಗ ಪದ್ದತಿಯಲ್ಲಿ ಅಕಾಡೆಮಿಕ್ ವಿಧಾನಕ್ಕೆ ಆದ್ಯತೆಯಿದ್ದರೂ, ತಮ್ಮ ಸುತ್ತಲಿನ ಕಲಾ ಕ್ಷೇತ್ರದ ಪ್ರಭಾವದಿಂದ ಕಲಾ ವಿದ್ಯಾರ್ಥಿಗಳು ಕಲಿಯುವ ಹಂತದಲ್ಲಿಯೇ ಸಮಕಾಲೀನ ಕಲೆಯಿಂದ ಪ್ರಭಾವಿತರಾಗಿ, ಶಾಸ್ತ್ರೀಯ ವಿಧ್ಯಾಭ್ಯಾಸದಲ್ಲಿ ಗಂಭೀರವಾಗಿ ತೊಡಗಿಸಿಕೊಳ್ಳದೆ, ನವ್ಯತೆಯತ್ತ ಸಾಗುತ್ತ ವ್ಯಾಸಂಗ ಮುಗಿಸುವುದಕ್ಕೆ ಮುಂಚೆಯೇ ತಮ್ಮತನವನ್ನು ರೂಡಿಸಿಕೊಳ್ಳಲು ಪ್ರಯತ್ನಿಸುವುದು ಈಗೀಗ ಸಾಮಾನ್ಯವಾಗಿದೆ.

ಸಂಗೀತ ಮತ್ತು ನಾಟ್ಯ ಕ್ಷೇತ್ರಗಳಲ್ಲಿ ವಿದ್ಯಾರ್ಥಿಗಳು ಕ್ರಮಬದ್ಧವಾಗಿ ವ್ಯಾಸಂಗವನ್ನು ಮುಗಿಸಿ, ಹಲವು ವರ್ಷಗಳ ಸಾಧನೆಯ ನಂತರ ತಮ್ಮ ಗುರುಗಳ ಅಪ್ಪಣೆ ಪಡೆದ ನಂತರವೇ, ಕಚೇರಿಗಳನ್ನು ನಡೆಸುವುದಕ್ಕೆ, ರಂಗ ಪ್ರವೇಶಕ್ಕೆ ಸನ್ನದ್ಧರಾಗುತ್ತಾರೆ. ಆದರೆ ಚಿತ್ರಕಲಾ ಕ್ಷೇತ್ರದಲ್ಲಿ ಹಾಗಾಗುವುದಿಲ್ಲ, ಇಲ್ಲಿ ವಿದ್ಯಾರ್ಥಿಗಳಿಗೆ ಹೆಚ್ಚಿನ ಸ್ವಾತಂತ್ರ್ಯವಿದೆ ಮತ್ತು ಅತೀ ವೇಗದಿಂದ ಬೆಳೆಯುತ್ತಿರುವ ಈ ರಂಗದಲ್ಲಿ ಅವಕಾಶಗಳೂ ವಿಪುಲವಾಗಿವೆ. ಹಾಗಾಗಿ ಪಕ್ವತೆ ಪಡೆಯದೆಯೂ, ಪ್ರಚಾರದ ಹಂಬಲದಿಂದಲೋ ಅಥವಾ ಕಲಾವಲಯದಲ್ಲಿ ತಮ್ಮನ್ನು ಗುರುತಿಸಿಕೊಳ್ಳಲೆಂದೊ, ವಿದ್ಯಾರ್ಥಿ



ಸುಪ್ರಿಯ ವರ್ಮರ ಕಲಾಕೃತಿ ತೈಲವರ್ಣ - 1998

ದಿಶೆಯಲ್ಲಿಯೇ ಏಕವ್ಯಕ್ತಿ ಪ್ರದರ್ಶನಗಳನ್ನು ನೀಡುವ ಸಾಹಸಕ್ಕೆ ಮುಂದಾಗುವುದು ಈಗೀಗ ಹೆಚ್ಚಾಗುತ್ತಿದೆ. ಪ್ರಸ್ತುತ ಕಲಬುರ್ಗಿಯ ''ಚಿತ್ತಾರಿ ಆರ್ಟ್ ಗ್ಯಾಲರಿ''ಯಲ್ಲಿ ಇತ್ತೀಚೆಗೆ ನಡೆದ ಏಕ ವ್ಯಕ್ತಿ ಪ್ರದರ್ಶನ ಈ ಬಗೆಯದು. ಕಲಾವಿದೆ ಕುಮಾರಿ ಸುಪ್ರಿಯಾವರ್ಮ, ಇಲ್ಲಿಯ ಕಾಲೇಜ್ ಆಫ್ ವಿಜುಯಲ್ ಆರ್ಟ್‌ನ ಬಿ.ಎಫ್.ಎ.ನಲ್ಲಿ ಕೊನೆಯ ವರ್ಷದ ವಿದ್ಯಾರ್ಥಿನಿ. ಈಗಾಗಲೇ ಅನೇಕ ಸಮೂಹ ಕಲಾ ಪ್ರದರ್ಶದಲ್ಲಿ ಮತ್ತು ರಾಷ್ಟ್ರಮಟ್ಟದ ಕಲಾಮೇಳಗಳಲ್ಲಿ ಭಾಗವಹಿಸಿ, ಕಲಾಕ್ಷೇತ್ರಕ್ಕೆ ತಮ್ಮನ್ನು ಪರಿಚಯಿಸಿಕೊಂಡಿದ್ದಾರೆ. ಪ್ರದರ್ಶನದಲ್ಲಿ ವಿವಿಧ ಮಾಧ್ಯಮಗಳಲ್ಲಿ ರಚಿಸಲ್ಪಟ್ಟ 26 ಕೃತಿಗಳಿವೆ. ಗಂಭೀರವಾದ ಚಿಂತನೆಗೊಳಗಾಗದ ಕಲಾ ವಿದ್ಯಾರ್ಥಿಗಳು ಚಿತ್ರ ರಚನೆಗೆ ಆರಿಸಿಕೊಳ್ಳುವುದು, ತಮ್ಮ ಸುತ್ತಮುತ್ತಲಿನ ಸಮಾಜದ ವಸ್ತುಗಳೇ ಆಗಿರುತ್ತವೆ. ಅದರಲ್ಲಿಯೂ ಮಹಿಳಾ ಕಲಾವಿದರು ಸ್ವಾಭಾವಿಕವಾಗಿ ಇಷ್ಟಪಡುವುದು ಸ್ತ್ರೀ ಸಮಸ್ಯೆಗಳನ್ನು ಬಿಂಬಿಸುವ ವಿಷಯಗಳನ್ನೇ. ಇಲ್ಲಿಯೂ ''ಹೋಪ್'' ಶೀರ್ಷಿಕೆಯಡಿಯಲ್ಲಿ ರಚಿಸಲ್ಪಟ್ಟ ಕೃತಿಗಳು ಸ್ತ್ರೀ ಜೀವನಕ್ಕೆ ಸಂಬಂಧಿಸಿದ್ದೇ ಆಗಿವೆ. ಮೇಲ್ನೋಟಕ್ಕೆ ಕೃತಿಗಳು ವಸ್ತು ಪ್ರಧಾನವಾಗಿ ಕಂಡರೂ, ಕಲಾವಿದೆ ತಂತ್ರ ಮತ್ತು ಶೈಲಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದರಿಂದ ವಿಷಯವು ಗೌಣವಾಗಿದೆ.

ಅಕಾಡೆಮಿಕ್ ಶೈಲಿಯ ಶುದ್ಧ ವರ್ಣಗಳ ಬಳಕೆ ಮತ್ತು ಬಹುತೇಕ ಮಹಿಳಾ ಕಲಾವಿದರ ಕೃತಿಗಳಲ್ಲಿ ಕಾಣುವ ನಯಗಾರಿಕೆ ಮತ್ತು ಲಾಲಿತ್ಯ ಇವರ ಚಿತ್ರಗಳಲ್ಲಿ ಕಂಡುಬರದೆ ವರ್ಣಗಳನ್ನು ದಟ್ಟವಾಗಿ ಮೆತ್ತಿರುವುದರಿಂದ ಒರಟು ಒರಟಾದ ಇವರ ಶೈಲಿ ಸಮಕಾಲೀನತೆಗೆ ಹತ್ತಿರವಾಗುತ್ತದೆ. ತೈಲ ಅಕ್ರೆಲಿಕ್, ಗ್ರಾಫಿಕ್ ಮಾಧ್ಯಮಗಳಲ್ಲಿ ರಚಿಸಲ್ಪಟ್ಟ ಚಿಕ್ಕಗಾತ್ರದ ಕೃತಿಗಳು ನಿರ್ವಹಣೆಯ ದೃಷ್ಟಿಯಿಂದ ಪರಿಣಾಮಕಾರಿಯಾಗಿವೆ. ದೊಡ್ಡ ಗಾತ್ರದ ಕೃತಿಗಳಲ್ಲಿ ಚಿತ್ರ ಕ್ಷೇತ್ರದ ಬಹುತೇಕ ಭಾಗ ಮನುಷ್ಯಾಕೃತಿಗಳು ಪ್ರಧಾನವಾಗಿ ಚಿತ್ರಿತವಾಗಿದ್ದರೂ ವಸ್ತು ಮತ್ತು ಹಿನ್ನೆಲೆಯ ಸಂಯೋಜನೆಯಲ್ಲಿ ನಿಯಂತ್ರಣವನ್ನು ಸಾಧಿಸಿದ್ದಾರೆ.

ವೀಕ್ಷಕರನ್ನು ಕ್ಷಣಕಾಲ ಹಿಡಿದಿಟ್ಟು ನಯನಮನೋಹರತೆಯನ್ನು ಉಂಟುಮಾಡುವ ಯಾವುದೇ ಕೃತಿಗಳು ಇಲ್ಲಿಲ್ಲದಿದ್ದರೂ ಕೆಲವು ಸೌಮ್ಯ ವರ್ಣಗಳಿಂದ, ಕೆಲವು ಪ್ರಖರವಾದ ಬಣ್ಣಗಳ ಸ್ವಚ್ಛ ನಿರ್ವಹಣೆಯಿಂದ ನೋಡುಗರ ಗಮನ ಸೆಳೆಯುತ್ತದೆ. ಹಲವು ನ್ಯೂನತೆಗಳನ್ನು ಹೊಂದಿಯೂ ಕಲಾವಿದೆ ಸಫಲವಾಗಿರುವುದು ಅವರ ಸ್ವಂತಿಕೆಯಲ್ಲಿ. ಸ್ವಾಭಾವಿಕವಾಗಿ ಯುವ ಕಲಾವಿದರ ಕೃತಿಗಳಲ್ಲಿರುವ ಹಿರಿಯ ಕಲಾವಿದರ ಪ್ರಭಾವ ಮತ್ತು ಅನುಕರಣೆ ಇವರ ಯಾವ ಕೃತಿಗಳಲ್ಲಿಯೂ ಕಂಡುಬರುವುದಿಲ್ಲ. ಈ ದೃಷ್ಟಿಯಿಂದ ಇವರ ಪರಿಶ್ರಮ ಸಾರ್ಥಕತೆಯನ್ನು ಪಡೆದಿದೆ.

ಸಂಯುಕ್ತ ಕರ್ನಾಟಕ: 15. 11. 98 — **ಕುಪ್ಪಣ್ಣ ಕಂದಗಲ್**

# ಪ್ರಜ್ಞೆಯೊಂದಿಗೆ ಚಕ್ಕಂದವಾಡುವ ಸಮಕಾಲೀನ ಪ್ರಯೋಗಗಳು

ಹೆಚ್ಚಿನ ಜನರು ಸಮಕಾಲೀನ ಕಲೆಗೆ ಹತ್ತಿರವಾಗುತ್ತಿರುವಂತೆಯೇ ಇತ್ತೀಚಿನ ಕಲೆಯು ಇನ್ನಷ್ಟು ಸಂಕೀರ್ಣತೆಯೆಡೆಗೆ ಸಾಗುತ್ತಿದೆ. ಈ ಹಿಂದೆ ನವ್ಯಕೃತಿಗಳನ್ನೇ ತುಂಬ ಸಂಕೀರ್ಣ, ಅರ್ಥವಾಗದ್ದು ಎಂದು ಕರೆದಿದ್ದ ಬಹುತೇಕ ಜನರು ಇಂದು ನವ್ಯ ಕೃತಿಗಳನ್ನು ಆಪ್ತವಾಗಿ ನೋಡಲು ತೊಡಗಿದ್ದಾರೆ. ಆದರೆ ಈ ಮಧ್ಯೆ ಇಂದಿನ ಮುಂಚೂಣಿಯ ಕಲೆಯು ಇನ್ನಷ್ಟು ಸಂಕೀರ್ಣವಾಗುತ್ತ ಹೆಚ್ಚಿನ ಜನರಿಂದ ದೂರವಾಗುತ್ತಿದೆ. ಈ ಹಿಂದೆ ಕಲಾತ್ಮಕತೆಗೆ ಆದ್ಯತೆಯಿದ್ದು ಇದೀಗ ಕಾನ್‌ಸೆಪ್ಟ್‌ಗೆ ಪ್ರಾಧಾನ್ಯ ಬಂದಿರುವುದೂ ಇದಕ್ಕೊಂದು ಕಾರಣವೆಂದರೆ ತಪ್ಪಲ್ಲ. ಈ ಹಿಂದೆ ಹೃದಯಕ್ಕೆ ಹತ್ತಿರವಾದ ಕೃತಿಗಳು ವಿಜೃಂಭಿಸುತ್ತಿದ್ದರೆ, ಇಂದು ಅದಕ್ಕಿಂತಲೂ ಬುದ್ಧಿಗೆ ಹತ್ತಿರವಾದ ಕೃತಿಗಳು ರಾರಾಜಿಸುತ್ತಿವೆ. ಪ್ರದರ್ಶನವು ನಮ್ಮ ಬುದ್ಧಿಶಕ್ತಿಗೆ ಕೂಡಾ ಗ್ರಾಸ ಒದಗಿಸಬಲ್ಲದು.



ಡಾ. ವಾಟಿಯನಂತರದ ಕೊನೇ ಊಟ

ಬ್ರಿಟನ್ನಿನ ನಿಕೋಲಾ ದುರ್ವಸುಲಾ ಹಾಗೂ ಹೈದರಾಬಾದಿನ ಸಿ.ಕೆ. ರಾಜನ್ ಅವರ ಕೃತಿಗಳ ಪ್ರದರ್ಶನವು ಈ ತಿಂಗಳ 20ರಿಂದ ಡಿಸೆಂಬರ್ 10ರ ವರೆಗೆ ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ನಡೆದಿದೆ. ನಿಕೋಲಾ ದುರ್ವಸುಲಾ ಅವರು ಫ್ರಾನ್ಸಿನಲ್ಲಿ ಕಲಾಭ್ಯಾಸ ಮಾಡಿ ಅಲ್ಲಿನ ಅತೆಲಿಯರ್‌ನಲ್ಲಿಯೂ ಕೆಲಸ ಮಾಡಿದ್ದಾರೆ. ಈಗ ಹೈದರಾಬಾದಿನ ಸರೋಜಿನಿ ನಾಯ್ಡು ಲಲಿತಕಲಾ ಮಹಾವಿದ್ಯಾಲಯದಲ್ಲಿ ಅತಿಥಿ ಉಪನ್ಯಾಸಕಿ ಆಗಿರುವ ಇವರು ವಿಶ್ವದ ಪ್ರಮುಖ ಕಲಾಪ್ರದರ್ಶನದಲ್ಲಿ ಭಾಗವಹಿಸಿದ್ದಾರೆ. ಈಗ ಹೈದರಾಬಾದಿನಲ್ಲಿರುವ ಸಿ.ಕೆ. ರಾಜನ್ ಅವರು ಮೂಲತಃ ಕೇರಳದ ತ್ರಿಚೂರಿನವರು, ಮೊದಲು ತ್ರಿವೇಂದ್ರಮ್‌ನ ಕಾಲೇಜ್ ಆಫ್ ಆರ್ಟ್‌ನಲ್ಲಿ ಪದವಿ ಪಡೆದು ಬಳಿಕ ಹೈದರಾಬಾದಿನ ಎಸ್.ಎನ್. ಶಾಲೆಯಿಂದ ಸ್ನಾತಕೋತ್ತರ ಪದವಿ ಪಡೆದಿದ್ದಾರೆ.

ನವ್ಯೋತ್ತರದ ಕಲೆಯು ಹಲವು ಕ್ರಾಂತಿಕಾರಿ ಧೋರಣೆಗಳನ್ನು, ಪ್ರಯೋಗಗಳನ್ನು ನಮ್ಮ ಮುಂದೆ ಇಟ್ಟಿದೆ. ಕಲಾಭಿವ್ಯಕ್ತಿಗೆ ಹಸ್ತ ಕೌಶಲ್ಯಕ್ಕಿಂತಲೂ ಕಲ್ಪನೆ ಮುಖ್ಯ ಎಂಬುದು ಇದರಲ್ಲೊಂದು. ನಮ್ಮ ನಡುವಣ ಸಾಮಾನ್ಯ ಸಂಗತಿಗಳನ್ನು 'ವಿಶಿಷ್ಟ' ರೀತಿಯಲ್ಲಿ ಪ್ರದರ್ಶಿಸಿದಾಗ ಅದು ಕಲಾಕೃತಿಯಾಗುತ್ತದೆ ಎನ್ನುವುದು ಇನ್ನೊಂದು. ಅದಕ್ಕೆ ವಿಪುಲವಾದ ಉದಾಹರಣೆಗಳು ನಿಕೋಲಾ ದುರ್ವಸುಲಾ ಅವರ ''ಸೆನ್ಸ್ ಇನ್‌ಸೆನ್ಸ್'' ಶೀರ್ಷಿಕೆಯ ಕೃತಿಯೊಂದಿದೆ. ನಮ್ಮ ಹಬ್ಬಹರಿದಿನಗಳಲ್ಲಿ ಊದುಬತ್ತಿ ಹಚ್ಚಿದಾಗ ಅದನ್ನು ಸಿಕ್ಕಿಸಲು ಸ್ಟ್ಯಾಂಡ್ ಇಲ್ಲದಿದ್ದಾಗ ಅಲ್ಲಿಯೇ ಇರುವ ಬಾಳೆಯ ಹಣ್ಣಿಗೆ ಸಿಕ್ಕಿಸಿ ಇಡುವುದಿಲ್ಲವೇ? ಅದರ ಪ್ರೇರಣೆಯಿಂದ ನಿಕೋಲಾ ಅವರು ಪಾಲಿಯೆಸ್ಟರೀನ್, ತಂತಿಗಳು, ಬಣ್ಣಗಳಿಂದ ಈ ಕೃತಿ ರಚಿಸಿದ್ದಾರೆ. ನಮಗೆ ತುಂಬ ಸಾಮಾನ್ಯವೆನಿಸಿದರೂ ವಿಶಿಷ್ಟ ಆವರಣದಲ್ಲಿ ಕಲಾತ್ಮಕತೆಯನ್ನು ಆರೋಪಿಸುವ ಈ ಕೃತಿ ಗಮನಾರ್ಹವೆನಿಸುತ್ತದೆ. ಇಲ್ಲಿ ಶೀರ್ಷಿಕೆಯ ವಿಶಿಷ್ಟ ಬಳಕೆಯ ಮೂಲಕವೂ ಕುತೂಹಲವನ್ನು ಹೆಚ್ಚಿಸಿದ್ದಾರೆ. ''ಸೆನ್ಸ್ ಇನ್‌ಸೆನ್ಸ್'' ನಲ್ಲಿ ಬಾಳೆಯ ಹಣ್ಣನ್ನು ಊದುಬತ್ತಿಯ ಧೂಪದಾರಿಯನ್ನಾಗಿ ಪರಿಭಾವಿಸಿದ ಬಗ್ಗೆ ಶ್ಲೇಷೆಯಿದೆ. ಪ್ರದರ್ಶನದಲ್ಲಿ ಹೀಗೆ ನಮ್ಮ ಪ್ರಜ್ಞೆಯೊಂದಿಗೆ ಚಕ್ಕಂದವಾಡುವ ಹಲವಾರು ಕೃತಿಗಳಿವೆ.

ಚಿಮಣಿ ದೀಪದ ಬುಡ್ಡಿಯಿಂದ ವಿದ್ಯುಚ್ಛಕ್ತಿ ಉತ್ಪಾದನೆಯಾಗುವುದಿಲ್ಲ ಎನ್ನುವುದು ಎಲ್ಲರಿಗೂ ಗೊತ್ತು. ಆದರೆ ಇಲ್ಲಿ ದೀಪದ ಜ್ವಾಲೆ ಬರುವಂತಹ ಸ್ಥಳಕ್ಕೆ ವೈರನ್ನು ಸಿಕ್ಕಿಸಿ ಇದರಿಂದ ವಿದ್ಯುತ್ ಬೆಳಕನ್ನು ಪಡೆಯಬಹುದೇನೋ ಎಂಬ ದ್ವಂದ್ವವನ್ನು ಈ ಕಲಾವಿದೆ ನಿರ್ಮಿಸುತ್ತಾರೆ. ಇನ್ನೊಂದೆಡೆ ಕಂಪ್ಯೂಟರಿನ ಮೌಸ್ ಇರುವ ಪ್ಲಾಸ್ಟಿಕ್ ಹೊದಿಕೆಯನ್ನು ಯಥಾವತ್ತಾಗಿ ಪ್ರದರ್ಶಿಸಿ ಅದರೊಳಗೆ ''ದಿಸ್ ಈಸ್ ನಾಟ್ ಎ ಮೌಸ್'' ಎಂದು ಬರೆದಿದ್ದಾರೆ. ಇನ್ನೊಂದೆಡೆ ದೊಡ್ಡ ಬಿಳಿಯ ಹಾಳೆಯಲ್ಲಿ ಕಣ್ಣಿನ ರೆಪ್ಪೆಯ ಒಂದು ಕೂದಲನ್ನು ಮಾತ್ರವೇ ಚಿತ್ರಿಸಿ ಅದರ ಪಕ್ಕದಲ್ಲಿ ''ಡೆತ್ ಆಫ್ ಎನ್ ಐ ಲ್ಯಾಶ್'' ಎಂದು ಬರೆದಿದ್ದಾರೆ. ಹೀಗೆ ಮ್ಯಾಕ್ಸ್ ಎರ್ನ್ಸ್ಟ್, ಮಾರ್ಸೆಲ್ ಡ್ಯೂಷಾಂ ಮುಂತಾದ ದಾದಾಯಿಸಂ ಪಂಥದ ಕಲಾವಿದರು ಅನುಸರಿಸಿದ ತಂತ್ರಗಳ ಬಳಕೆ ಇರುವುದರಿಂದ ಇದನ್ನು ನಿಯೋದಾದಾ ಕಲೆ ಎನ್ನಬಹುದಾಗಿದೆ.



ಟಿ.ಎಸ್. ಮುರಳಿಯವರ 'ಲೇಕ್‌ಸೈಡ್ ರಿಫ್ಲೆಕ್ಷನ್ಸ್'

ಸಿ.ಕೆ. ರಾಜನ್ ಅವರು ಕೂಡಾ ಫೋಟೋ ಮಾಂಟಾಜ್ ಕೃತಿಗಳೊಂದಿಗೆ ಈ ಬಗೆಯ ಕುತೂಹಲಕಾರಿ ಕೃತಿಗಳನ್ನು ಪ್ರದರ್ಶಿಸಿದ್ದಾರೆ. ಮಕ್ಕಳು ಮಾಡುವಂತೆ ವರ್ಣ ಛಾಯಾಚಿತ್ರಗಳ ತುಣುಕುಗಳನ್ನು ಅಂಟಿಸಿಯೂ

ಹಲವು ಕೃತಿಗಳನ್ನು ರಚಿಸಿದ್ದಾರೆ. ಸರ್ರಿಯಲಿಸ್ಟರಂತೆ ಅವಾಸ್ತವವನ್ನು ವಾಸ್ತವದಲ್ಲಿಟ್ಟು ನೋಡುವ ಪ್ರಯತ್ನ ಇಲ್ಲಿನದು. ಇಲ್ಲೆಲ್ಲ ಕಲಾತ್ಮಕತೆಗಿಂತಲೂ ಬುದ್ಧಿಶಕ್ತಿಗೆ ಕೆಲಸ ಹೆಚ್ಚಾಗಿದೆ. ಇನ್ನೊಂದೆಡೆ 'ಪ್ರಿ ಇಂಡಸ್ಟ್ರಿಯಲ್ ಟೈಮ್' ಕೃತಿಯಲ್ಲಿ ವಾಸ್ತವದ ಕೈಗಡಿಯಾರಕ್ಕೆ ಬಹು ಉದ್ದನೆಯ ಬೆಲ್ಟನ್ನು ಕಟ್ಟಿದ್ದಾರೆ. ಹೀಗೆ ಕೈಗೆ ಕಟ್ಟಿಕೊಳ್ಳಬೇಕಾದಂತಹ ಕೈಗಡಿಯಾರ ಕಟ್ಟಿಕೊಳ್ಳಲಾಗದಂತಿದೆ ಇಲ್ಲವೇ ಇಲ್ಲಿ ತುಂಬ ದಪ್ಪನೆಯ ಕೈಗಳು ಬೇಕಾಗಿವೆ.

ಸಮಕಾಲೀನ ಸಂಗತಿಗಳ ಅಭಿವ್ಯಕ್ತಿಗೆ ಸರಳ ಹಾಗೂ ನೇರವಾದ ಲೈಂಗಿಕ ಕ್ರಿಯೆಯ ದೃಶ್ಯಗಳನ್ನು ನಿಕೋಲಾ ಅವರು ಬಳಸಿಕೊಂಡಿದ್ದಾರೆ. ಹೀಗೆ ಚಿತ್ರ, ಶಿಲ್ಪ, ರೆಡಿಮೇಡ್ಸ್, ಅಸೆಂಬ್ಲೇಜ್‌ಗಳ ಮೂಲಕ ಸಂಕೀರ್ಣವಾಗಿರುವ ಪ್ರದರ್ಶನದಲ್ಲಿ ಬೌದ್ಧಿಕ ಕಸರತ್ತಿಗೂ ವಿಪುಲ ಅವಕಾಶವನ್ನು ಈ ಕಲಾವಿದರು ನೀಡಿದ್ದಾರೆ. ಈ ಪ್ರತಿಯೊಂದು ಕೃತಿಯ ಹಿಂದೆಯೂ ವೈಚಾರಿಕತೆಯೂ ಕೆಲಸ ಮಾಡಿದ್ದು ಇವುಗಳಲ್ಲಿ ವೈಚಾರಿಕ ನಿಲುವುಗಳೂ ಇವೆ. ಹೀಗೆ ಹಲವು ನೆಲೆಗಳಲ್ಲಿ ಕುತೂಹಲಕಾರಿಯಾದ ಕಲಾ ಪ್ರದರ್ಶನವಿದು.



ಟಿ.ಎಸ್. ಮುರಳಿಯವರು ಮೈಸೂರಿನ ಕಲಾನಿಕೇತನ ಕಲಾಶಾಲೆಯಲ್ಲಿ ಡಿಪ್ಲೊಮಾ ಪಡೆದವರು. ಅವರ ಈಚಿನ ಚಿತ್ರಗಳ ಪ್ರದರ್ಶನವನ್ನು ಈ ತಿಂಗಳ 16ರಿಂದ 30ರವರೆಗೆ ಬೆಂಗಳೂರಿನ ಮಣಿಪಾಲ್ ಸೆಂಟರ್‌ನಲ್ಲಿರುವ ಸೆಂಟ್ರಲ್ ಪಾರ್ಕ್ ಹೋಟೆಲಿನ ''ಕಾರಿಡಾರ್ ಆಫ್ ಕಲರ್ಸ್''ನಲ್ಲಿ ಏರ್ಪಡಿಸಿದ್ದಾರೆ. ಪ್ರದರ್ಶಿತ ಕೃತಿಗಳಲ್ಲಿ ಮೂರು ಸಂಯೋಜನಾ ಚಿತ್ರ ಹೊರತುಪಡಿಸಿದರೆ ಉಳಿದೆಲ್ಲವೂ ನಿಸರ್ಗ ದೃಶ್ಯಗಳು.

ಇವರ ಕೃತಿಗಳೆಲ್ಲ ಬಹುತೇಕ ಕಲಾಶಾಲೆಯ ವಿದ್ಯಾರ್ಥಿಗಳ ಅಭ್ಯಾಸದ ನೆಲೆಯ ಕೃತಿಗಳೇ ಆಗಿವೆ. ಗಂಭೀರ ಕಲಾವಿದರಿಂದ ನಿರೀಕ್ಷಿಸುವಂತೆ ಅನಿಸಿಕೆಗಳ ಅಭಿವ್ಯಕ್ತಿ ಇಲ್ಲಿಲ್ಲ. ಬದಲಿಗೆ ತಾವು ಆರಿಸಿಕೊಂಡ ನಿಸರ್ಗ ದೃಶ್ಯಗಳಿಗೆ ಬದ್ಧರಾಗಿ ಅವುಗಳನ್ನು ರಚಿಸಿದ್ದಾರೆ. ವಾಸ್ತವಕ್ಕೆ ಸಾಮೀಪ್ಯವುಳ್ಳಂತೆ ರಚಿಸಿದ ಇವುಗಳ ನಿರ್ವಹಣೆಯಲ್ಲಿಯೂ ಏರಿಳಿತವಿದೆ. ಕೆಲವು ಕೃತಿಗಳಲ್ಲಿ ಉತ್ತಮ ನಿರ್ವಹಣೆಯಿದ್ದರೆ ಮತ್ತೆ ಕೆಲವು ಸಾಮಾನ್ಯ ನೆಲೆಯಲ್ಲಿವೆ. ಹೀಗೆ ಇವರ ಸ್ಟಿಂಕ್ಲಿಂಗ್ ರೈನ್, ಮಿಸ್ಟ್, ರೈನ್‌ಸ್ಕೇಪ್, ಲೇಕ್‌ಸೈಡ್ ರಿಫ್ಲೆಕ್ಷನ್, ವೇ ಟು ಮೈ ವಿಲೇಜ್, ಎನ್ ಈವಿನಿಂಗ್ ಇನ್ ಮೇಲ್ಕೋಟೆ ವಿಲೇಜ್ ಕೃತಿಗಳಲ್ಲಿ ಚೈತನ್ಯದಾಯೀ ನಿರ್ವಹಣೆಯಿದ್ದು ನಮ್ಮ ಮನತಟ್ಟುವಂತಿದೆ. ಇವುಗಳಲ್ಲಿ ಜಲವರ್ಣವನ್ನು ಶುದ್ಧ ಹಾಗೂ ಆಹ್ಲಾದವೆನಿಸುವಂತೆ ನಿರ್ವಹಿಸಿದ್ದಾರೆ.

ಇವರು ಜಲವರ್ಣದಲ್ಲಿ ಮಿಂಚಿದರೆ ಉಳಿದ ಮಾಧ್ಯಮಗಳಲ್ಲಿ ಹಿನ್ನಡೆ ತೋರಿಸುತ್ತಾರೆ. ಇವರ ಪೋಸ್ಟರ್ ವರ್ಣ ಹಾಗೂ ತೈಲವರ್ಣದ ಕೃತಿಗಳಲ್ಲಿ ಜಡತೆ ಮನೆ ಮಾಡಿದೆ.

ಅಕಾಡೆಮಿಕ್ ನೆಲೆಯ ಈ ಕೃತಿಗಳಲ್ಲಿ ರೊಮ್ಯಾಂಟಿಕ್ ಆಶಯಗಳಿಗೆ ಒತ್ತಾಸೆಯಿದೆ. ಪ್ರದರ್ಶನದಲ್ಲಿರುವ ಮೂರು ಸಂಯೋಜನಾ ಕೃತಿಗಳೂ ಸಾಮಾನ್ಯ ನೆಲೆಯಲ್ಲಿವೆ.

ಒಟ್ಟಾರೆಯಾಗಿ ಟಿ.ಎಸ್. ಮುರಳಿ ಅವರಿಗೆ ಒಳ್ಳೆಯ ಹಸ್ತಕೌಶಲ್ಯವಿದೆ. ಸೂಕ್ತ ಅವಕಾಶ, ಎಕ್ಸ್‌ಪೋಶರ್ ದೊರೆತರೆ ಈ ಕಲಾವಿದ ಬೆಳೆಯುವುದರಲ್ಲಿ ಸಂದೇಹವಿಲ್ಲ.

ಪ್ರಜಾವಾಣಿ : 28. 11. 98

**ಚಿ.ಸು. ಕೃಷ್ಣಸೆಟ್ಟಿ**

# ಕಲಬುರ್ಗಿಯಲ್ಲೊಂದು ವಿಶಿಷ್ಟವಾದ ಕಲಾಶಿಬಿರ

ಇಂದು ಬೆಂಗಳೂರನ್ನು ಹೊರತುಪಡಿಸಿದರೆ ನಿರಂತರವಾಗಿ ಕಲಾ ಚಟುವಟಿಕೆಗಳು ನಡೆಯುತ್ತಿರುವ ರಾಜ್ಯದ ಮತ್ತೊಂದು ಪ್ರಮುಖ ಸ್ಥಳವೆಂದರೆ, ಕಲಬುರ್ಗಿ. ಕಲೆಗೆ ಮಾರುಕಟ್ಟೆಯೇ ಇಲ್ಲದ ಈ ಪ್ರದೇಶದಲ್ಲಿ ಸುಮಾರು ಒಂದು ವರ್ಷದ ಹಿಂದೆ ಪ್ರಾರಂಭವಾದ ಇಲ್ಲಿಯ ''ಚಿತ್ತಾರಿ ಆರ್ಟ್ ಗ್ಯಾಲರಿ'' ಯೂ ಸಹ ಹಲವು ಉಪಯುಕ್ತ ಕಾರ್ಯಕ್ರಮಗಳನ್ನು ಏರ್ಪಡಿಸುವ ಮೂಲಕ ಕಲಾವಿದರಿಗೆ ಬೆಂಬಲವಾಗಿ ನಿಂತು, ಸಾರ್ವಜನಿಕರಲ್ಲಿ ಕಲೆಯ ಬಗ್ಗೆ ಅರಿವು ಮೂಡಿಸಲು ಪ್ರಯತ್ನಿಸುತ್ತಿದೆ.

ಇಂತಹ ಒಂದು ಪ್ರಯತ್ನದ ಅಂಗವಾಗಿ ದಿನಾಂಕ 22-11-98 ರಂದು ಈ ಗ್ಯಾಲರಿಯಲ್ಲಿ ಒಂದು ದಿವಸದ ಚಿತ್ರಕಲಾ ಶಿಬಿರ ನಡೆಯಿತು. ರಾಜ್ಯ ಮತ್ತು ರಾಷ್ಟ್ರಮಟ್ಟದ ಪ್ರಮುಖ ಕಲಾವಿದರೊಂದಿಗೆ ಹಲವು ಹೊಸಬರೂ ಸೇರಿ ಒಟ್ಟು 13 ಕಲಾವಿದರು ಈ ಶಿಬಿರದಲ್ಲಿ ಭಾಗವಹಿಸಿದ್ದರು. ಕಲಾಕೃತಿಗಳ ಗುಣ ಮಟ್ಟದ ದೃಷ್ಟಿಯಿಂದ ಇಂತಹ ಕಲಾ ಶಿಬಿರಗಳು ಎಷ್ಟರಮಟ್ಟಿಗೆ ಸಾರ್ಥಕತೆಯನ್ನು ಪಡೆಯುತ್ತವೆ ಎಂಬುದೂ ವಿಚಾರಕ್ಕೊಳಪಡಬೇಕಾದ ಅಂಶವೇ. ಸಮಯದ ನಿರ್ಬಂಧನೆಯಿಲ್ಲದೆ, ಕಲಾವಿದನ ಏಕಾಂತದಲ್ಲಿ ಸಹಜವಾಗಿ ನಡೆಯುವ ಸೃಷ್ಟಿ ಕ್ರಿಯೆಗೂ ಸಾರ್ವಜನಿಕರೆದುರು ಸೀಮಿತ ಅವಧಿಯೊಳಗೆ ರಚಿಸಲ್ಪಡುವ ಕಲಾಕೃತಿಗಳಿಗೂ ಬಹಳಷ್ಟು ಅಂತರವಿರುತ್ತದೆ. ತನ್ನದೇ ಖಾಸಗಿ ಆವರಣದಲ್ಲಿ ಪೂರ್ಣ ಸ್ವಾತಂತ್ರ್ಯದೊಡನೆ ಕೃತಿ ರಚಿಸುವಾಗ ಕಲಾವಿದ ಹೊಸ ಹೊಸ ಆವಿಷ್ಕಾರಗಳತ್ತ ದೃಷ್ಟಿ



ಬಿ.ಎಲ್. ಜಾನೆ ಅವರ ಕಲಾಕೃತಿ - 1998

ಹರಿಸುತ್ತಾನೆ. ಕಲೆಯ ನಿಗೂಢ ಅಂಶಗಳು ಅವನಿಗೆ ಗೋಚರಿಸುತ್ತಾ ಹೋಗುತ್ತವೆ. ಆದರೆ ಕಲಾಶಿಬಿರಗಳಲ್ಲಿ ಈ ಯಾವ ಅಂಶಗಳೂ ಸಾಧ್ಯವಾಗದೆ ಕೃತಿ ರಚನೆ ಯಾಂತ್ರಿಕವಾಗುತ್ತದೆ. ಕಲಾಕೃತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸುವುದೇ ಕಲಾವಿದನ ಧೋರಣೆಯಾಗಿ ತಾನು ಆ ಮೊದಲೇ ರೂಢಿಸಿಕೊಂಡ ವಿಧಾನದಲ್ಲಿ ಕೃತಿ ರಚಿಸಿ ಕರ್ತವ್ಯವನ್ನು ಪೂರೈಸುತ್ತಾನೆ. ಆದ್ದರಿಂದ ಇಂತಹ ಸಂದರ್ಭದಲ್ಲಿ ಉತ್ತಮ ಮಟ್ಟದ ಕೃತಿಗಳನ್ನು ನಿರೀಕ್ಷಿಸುವುದು ಸಮಂಜಸವೆನಿಸುವುದಿಲ್ಲ. ಪ್ರಸ್ತುತ ನಡೆದ ಕಲಾಶಿಬಿರವೂ ಇದೇ ಬಗೆಯದು. ಇಲ್ಲಿ ಭಾಗವಹಿಸಿದ್ದ ಬಹುತೇಕ ಕಲಾವಿದರು ಹಲವು ವರ್ಷಗಳಿಂದ ಕ್ಲೀಷೆ ಎನ್ನಿಸುವಷ್ಟು ಒಂದೇ ಬಗೆಯ ಚಿತ್ರಗಳನ್ನು ರಚಿಸುತ್ತ ತಂತ್ರ ಮತ್ತು ಶೈಲಿಯಲ್ಲಿ ತಮ್ಮದೇ ಆದ ಸ್ವಂತಿಕೆಯನ್ನು ಸ್ಥಾಪಿಸಿಕೊಂಡವರು.

ಕಲಾಶಿಬಿರದ ಹಿರಿಯ ಮತ್ತು ಪ್ರಮುಖ ಕಲಾವಿದರಾದ ಜೆ.ಎಸ್. ಖಂಡೇರಾವ್ ಅವರು ಒಂದೂವರೆ ದಶಕದಿಂದ ರೂಢಿಸಿಕೊಂಡ ನಿಶ್ಚಿತ ಶೈಲಿಯಲ್ಲಿ ತಮ್ಮ ''ಎಂಡೊ'' ಸರಣಿಯ ಅಮೂರ್ತ ಚಿತ್ರವೊಂದನ್ನು ರಚಿಸಿದ್ದಾರೆ. 60ರ ದಶಕದಲ್ಲಿ ಜೆ. ಜೆ. ಶಾಲೆಯಲ್ಲಿ ವ್ಯಾಸಂಗ ಮಾಡಿದ ಇವರ ಕೃತಿಯಲ್ಲಿ ಆ ಶೈಲಿಯ ಪರಿಶುದ್ಧ ವರ್ಣಗಳ ಬಳಕೆ ಮತ್ತು ಅತ್ಯುತ್ತಮ ನಿರ್ವಹಣೆಯನ್ನು ಇಂದೂ ಕಾಣಬಹುದು. ಮತ್ತೊಬ್ಬ ಹಿರಿಯ ಕಲಾವಿದರಾದ ಎಂ. ಬಿ. ಲೊಹಾರ ಅವರ ಕೃತಿಯಲ್ಲಿ ಅವರ ಎಂದಿನ ತಂತ್ರವೇ ಇದ್ದರೂ ವಸ್ತುವಿನ ಆಯ್ಕೆ ಮತ್ತು ವರ್ಣಗಳ ಬಳಕೆ ಕುತೂಹಲ ಹುಟ್ಟಿಸುವಂತಹದು.

ಮೂರ್ತದಿಂದ ಅಮೂರ್ತದತ್ತ ಸಾಗುವಂತೆ ಕಾಣುವ ಬಸವರಾಜ ಜಾಸಿಯವರ ಕೃತಿಯಲ್ಲಿ ಆಕೃತಿಗಳು ಗೌಣವಾಗಿ ದಟ್ಟವಾದ ವರ್ಣಗಳ ಬಳಕೆ ಮತ್ತು ಉತ್ತಮ ಸಂಯೋಜನೆ ಪ್ರಧಾನವೆನಿಸುತ್ತದೆ. ಅಕ್ರೆಲಿಕ್ ಮಾಧ್ಯಮವನ್ನು ತಮ್ಮ ತಂತ್ರಕ್ಕೆ ಸಮರ್ಪಕವಾಗಿ ಅಳವಡಿಸಿಕೊಂಡ ಮೋಹನ ಸೀತನೂರವರ ಚಿತ್ರ ಅಮೂರ್ತವೆನಿಸಿದರೂ, ಪರಿಸರದ ಛಾಯೆ ಮತ್ತು ನಿಸರ್ಗದಲ್ಲಿಯ ಏರುಪೇರುಗಳನ್ನು ಸೂಚಿಸಲು ರೂಪಗಳ ನೆರವು ಪಡೆಯುತ್ತದೆ. ಮಾನವ ಸಂಬಂಧಗಳನ್ನು ಅಸ್ಪಷ್ಟ ರೂಪಗಳ ಮೂಲಕ ಚಿತ್ರಿಸಿರುವ ಪೂರ್ಣಿಮಾ ಪಾಟೀಲರ ಕೃತಿಯಲ್ಲಿ ದಟ್ಟವಾದ ರೇಖೆಗಳು ಮತ್ತು ಒರಟಾದ ಬಣ್ಣಗಳ ಲೇಪನವಿದ್ದರೂ ಕೃತಿಯಲ್ಲಿ ಲಯಬದ್ಧತೆ ಇದೆ.

ಪರಿಶುದ್ಧ ವರ್ಣಮೇಳ ಹಾಗೂ ಸಶಕ್ತ ನಿರ್ವಹಣೆಯ ದೃಷ್ಟಿಯಿಂದ ರಾಜಶೇಖರ್ ಮತ್ತು ವೀರೇಂದ್ರ ಶಹಾರವರ ಅಮೂರ್ತ ಚಿತ್ರಗಳು ಗಮನ ಸೆಳೆಯುತ್ತವೆ. ಅಕ್ರೆಲಿಕ್ ಮಾಧ್ಯಮದಿಂದ ಮೊದಲು ಒರಟಾದ ಹಿನ್ನೆಲೆ ರಚಿಸಿಕೊಂಡು ಯಾವುದೇ ಪೂರ್ವನಿರ್ಧಾರವಿಲ್ಲದೆ, ಅದರ ಮೇಲೆ ತೈಲ ಮಾಧ್ಯಮದಿಂದ ಆಕೃತಿಯನ್ನು ರಚಿಸುವುದು ಕಂದಗಲ್ ಅವರ ರಚನಾ ವಿಧಾನ. ಈ ಚಿತ್ರಗಳೊಂದಿಗೆ ಲೋಕಯ್ಯ, ಅಂಬಾರಾಯ, ಬಿರಾದರ, ನಾಗೂರೆ ಅವರ ಕೃತಿಗಳೂ ಉತ್ತಮಮಟ್ಟದಲ್ಲಿವೆ. ಕಲಾವಿದರ ಪ್ರೌಢಿಮೆಗೆ ಸವಾಲಿನಂತಿರುವ ಒಂದೇ ದಿನದ ಈ ಶಿಬಿರದಲ್ಲಿ ಸಮಯದ ನಿಬಂಧನೆಯನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಅದಕ್ಕೆ ತಕ್ಕಂತೆ ವಸ್ತು ಮತ್ತು ತಂತ್ರವನ್ನು ನಿರ್ಧರಿಸಿ, ಪರಿಪೂರ್ಣ ಕೃತಿಗಳನ್ನು ರಚಿಸುವಲ್ಲಿ ಎಲ್ಲಾ ಕಲಾವಿದರೂ ಪ್ರಬುದ್ಧತೆಯನ್ನು ತೋರಿದ್ದಾರೆ.

ಸಂಯುಕ್ತ ಕರ್ನಾಟಕ : 29. 11. 98

**ಕುಪ್ಪಣ್ಣ ಕಂದಗಲ್**

# ಮನಸೆಳೆದ ಚಿಣ್ಣರ ಕಲಾಪ್ರದರ್ಶನ

ಹಲವರು ಹಲವು ರೀತಿಯಲ್ಲಿ ಮಕ್ಕಳ ದಿನವನ್ನು ಆಚರಿಸಿಕೊಂಡಿರಬಹುದು. ಆದರೆ ಧಾರವಾಡದ ಕಲಾಮಂಡಳದವರು ಮಕ್ಕಳ ದಿನವನ್ನು ಆಚರಿಸಿದ ರೀತಿಯೇ ಬೇರೆ. ಧಾರವಾಡದ ಸರಕಾರಿ ಆರ್ಟ್ ಗ್ಯಾಲರಿಯಲ್ಲಿ ಮೂವರು ಪುಟ್ಟ ಮಕ್ಕಳ ಚಿತ್ರಕಲಾ ಪ್ರದರ್ಶನವನ್ನು ಏರ್ಪಡಿಸುವ ಮೂಲಕ ನೆಹರೂ ಅವರ ಜನ್ಮದಿನವನ್ನು ಅರ್ಥಪೂರ್ಣವಾಗಿ ಆಚರಿಸಲಾಯಿತು.

ವರುಣ ಕುರ್ತಕೋಟಿ : ವರುಣನ ಕೃತಿಗಳಲ್ಲಿ ಹೆಚ್ಚಿನವು ಶ್ರೀಕೃಷ್ಣನ ಕಥೆಯ ಕುರಿತಾಗಿದೆ. ಜೊತೆಗೆ ಕ್ರಿಕೆಟ್, ಬುದ್ಧ, ನಿಸರ್ಗ ದೃಶ್ಯ(ಲ್ಯಾಂಡ್‌ಸ್ಕೇಪ್)ಗಳೂ ಸೇರಿಕೊಂಡಿವೆ. ಕೃಷ್ಣನ ಕಾಳಿಂಗಮರ್ದನ ಇತ್ಯಾದಿ ದೃಶ್ಯಗಳಿದ್ದವು. ದೂರದರ್ಶನದಲ್ಲಿ ಪ್ರಸಾರವಾಗುವ ಶ್ರೀಕೃಷ್ಣಾ ಧಾರಾವಾಹಿಯ ಪ್ರಭಾವ ವರುಣನ ಮೇಲೆ ಬೀರಿರಬಹುದು. ಹೆಚ್ಚಾಗಿ ನೀಲಿ, ಹಸಿರು ವರ್ಣಗಳನ್ನು ಬಳಸಿಕೊಂಡಿದ್ದಾನೆ ಈತ.

ಅಕ್ಷತಾ ರಮೇಶ್ : ಅಕ್ಷತಾಳ ಒಟ್ಟು ಕೃತಿಗಳು ವೈವಿಧ್ಯತೆಯಿಂದ ಕೂಡಿವೆ. ಪರಿಸರ, ಪ್ರಾಣಿ, ಪಕ್ಷಿ, ತಾಯಿ-ಮಗು, ನಿಸರ್ಗ ದೃಶ್ಯ.... ಹೀಗೆ ವಿವಿಧ ಕೃತಿಗಳು. ವರ್ಣ ಬಳಕೆ, ಚಿತ್ರ ಸಂಯೋಜನೆ, ರೇಖೆಗಳ ಮಿಶ್ರಣದಿಂದ ವೀಕ್ಷಕರ ಗಮನ ಸೆಳೆಯುತ್ತವೆ, ಸೃಜನಶೀಲ ಕಲಾವಿದರ ನವ್ಯ ಕಲಾಕೃತಿಗಳ ಅಂಶಗಳು ಅಕ್ಷತಾಳ ಕೃತಿಗಳಲ್ಲಿವೆ. ಈಗಾಗಲೇ ಆಧುನಿಕ ಕಲಾ ಪ್ರೌಢಿಮೆಯಿದ್ದು, ಅಕ್ಷತಾಳ ತಾತಾ (ಅಂತರಾಷ್ಟ್ರೀಯ ಖ್ಯಾತಿಯ ಹಿರಿಯ ಕಲಾವಿದರಾದ (ಕನ್ನಡಿಗರು) ಬದರಿ ನಾರಾಯಣ ಇವರು ಪ್ರಭಾವ ಬೀರಿರಬಹುದು. ಹೀಗಾಗಿ ಅಕ್ಷತಾಳಲ್ಲಿ ಈಗಾಗಲೇ ಕಲಾವಿದೆಯಾಗುವ ಲಕ್ಷಣವಿದೆ.

ಅಭಿಷೇಕ್ ದೇಸಾಯಿ : ಅಭಿಷೇಕ್ ವಿವಿಧ ಮಾಧ್ಯಮದ ರೇಖಾಚಿತ್ರ, ವರ್ಣಚಿತ್ರ, ಗ್ರಾಫಿಕ್ (ಲೀನೊ) ಮುದ್ರಣ, ಕೃತಿಗಳಲ್ಲಿ ಬಲೂನ್ ಮಾರುವ, ಗಾರ್ಡನ್, ಲ್ಯಾಂಡ್‌ಸ್ಕೇಪ್ ಕೃತಿಗಳ ಸಂಯೋಜನೆ, ವರ್ಣ ಸಂಯೋಜನೆಯಿಂದ ಸರಳ ರೀತಿಯಲ್ಲಿ ಚಿತ್ರಿಸಿದ್ದಾನೆ. ಅಭಿಷೇಕ್ ತನ್ನ ಕೃತಿಗಳಲ್ಲಿ ಸುತ್ತಲಿನ ಪ್ರಕೃತಿ ಸೌಂದರ್ಯವನ್ನು ವರ್ಣ ಸಂಯೋಜನೆಯಲ್ಲಿ ಸವಿದಿದ್ದಾನೆ. ಇದು ಈತನ ಐದನೆಯ ಕಲಾಪ್ರದರ್ಶನ. ಈತನ ತಂದೆಯೂ ಕಲಾವಿದರಾಗಿದ್ದು ಸದ್ಯ ಕರ್ನಾಟಕ ಲಲಿತಾಕಲಾ ಅಕಾಡೆಮಿಯ ಸದಸ್ಯರಾಗಿದ್ದಾರೆ.

ಒಟ್ಟಿನಲ್ಲಿ ಮೂವರೂ ಮಕ್ಕಳು ಹೇಳಬೇಕಾಗಿರುವುದನ್ನು ಸರಳ ಹಾಗೂ ಸುಲಭವಾದ ಅವಕಾಶ-ಆಕಾರಗಳಿಂದ ಚಿತ್ರಿಸಿ ಯಶಸ್ವಿಯಾಗಿದ್ದಾರೆ.



ಅಭಿಷೇಕ್ ದೇಸಾಯಿಯ ಒಂದು ಕೃತಿ - 1998

ಚಿಗುರು : ಇದು ಮಕ್ಕಳ ದಿನಾಚರಣೆಯ ಅಂಗವಾಗಿ ನಡೆದ ಮತ್ತೊಂದು ಕಾರ್ಯಕ್ರಮ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಕಲಾಮಂಡಳ (ಧಾರವಾಡ) ಇವರ ಸಹಯೋಗದೊಂದಿಗೆ ''ಚಿಗುರು'' ಎಂಬ ಮಕ್ಕಳ ಚಿತ್ರ ಕಲಾ ಸ್ಪರ್ಧೆಯೊಂದನ್ನು ನಗರದ (10 ವರ್ಷದೊಳಗಿನ) ವಿವಿಧ ಶಾಲಾ ಮಕ್ಕಳಿಗೆ ಏರ್ಪಡಿಸಲಾಗಿತ್ತು. ಈ ಸ್ಪರ್ಧೆಯಲ್ಲಿ ಮಕ್ಕಳಿಗೆ ಯಾವುದೇ ವಿಷಯ, ನಿಯಮಗಳನ್ನು ನೀಡಿರಲಿಲ್ಲ. ಅವರ ಸ್ವಇಚ್ಛೆಯಿಂದ ಚಿತ್ರ ರಚಿಸಲು ಸ್ವಾತಂತ್ರ್ಯ ಇತ್ತು. ಮಕ್ಕಳಿಗೆ ಇತರ ವಿದ್ಯಾಭ್ಯಾಸಗಳ ಪ್ರಾಮುಖ್ಯತೆಯನ್ನು ಒಳ್ಳೆಯ ರೀತಿಯಲ್ಲಿ ಅರಿವು ಮಾಡಿಕೊಟ್ಟು ಅದರೊಡನೆ ಚಿತ್ರಕಲೆಯನ್ನು ಪ್ರೋತ್ಸಾಹಿಸಬೇಕು. ಹೀಗೆ ಮಾಡುವುದರಿಂದ ಮಗುವಿನ ಮಾನಸಿಕ ತುಮುಲವನ್ನು ಕಡಿಮೆ ಮಾಡಿದಂತಾಗುತ್ತದೆ ಮತ್ತು ಅವರ ಏಳ್ಗೆಗೆ ಪ್ರೋತ್ಸಾಹಿಸಿದಂತಾಗುತ್ತದೆ.

ಸಂಯುಕ್ತ ಕರ್ನಾಟಕ : 28. 12. 98

**ವಿಜಯಾನಂದ ಬಿ. ಕಾಲವಾಡ**

# ಜಾನಪದ ಜೀವನದ ಕಥಾನಕ ಕೃತಿಗಳು

ಕಲಾ ವಿದ್ಯಾರ್ಥಿಗಳು ತಮ್ಮ ಏಕವ್ಯಕ್ತಿ ಕಲಾಪ್ರದರ್ಶನ ಏರ್ಪಡಿಸುವುದು ಅಪರೂಪವಾದರೂ ಇತ್ತೀಚೆಗೆ ಕಲಾ ವಿದ್ಯಾರ್ಥಿಗಳ ಏಕವ್ಯಕ್ತಿ ಕಲಾಪ್ರದರ್ಶನ ಬೆಳವಣಿಗೆ ಕಾಣುತ್ತಿದೆ. ರಾಜ್ಯದಲ್ಲಿ ಹೊರರಾಜ್ಯದಲ್ಲಿ ನಡೆಯುವ ಕಲಾಪ್ರದರ್ಶನಗಳನ್ನು ನಾವು ಕಾಣಬಹುದು. ಇನ್ನೊಂದು ರೀತಿಯಲ್ಲಿ ಕಲಾ ಶಿಕ್ಷಕರ ಪ್ರೋತ್ಸಾಹದಿಂದಲೂ ವಿವಿಧ ನಗರಗಳ ಆರ್ಟ್ ಗ್ಯಾಲರಿಯಲ್ಲಿ ಈಗ ಹೆಚ್ಚಾಗಿವೆ.

ಈ ರೀತಿಯಾಗಿ ಧಾರವಾಡದ ಡಿ.ವಿ. ಹಾಲಭಾವಿ ಲಲಿತಕಲಾ ಮಹಾವಿದ್ಯಾಲಯದ ಅಂತಿಮ ವರ್ಷದಲ್ಲಿ ಕಲಾಭ್ಯಾಸದಲ್ಲಿರುವ ಕಲಾ ವಿದ್ಯಾರ್ಥಿಯಾದ ಸಂತೋಷ್ ಎಂ. ಪಾಟೀಲ ಇವರು ಧಾರವಾಡದ ಸರ್ಕಾರಿ ಆರ್ಟ್ ಗ್ಯಾಲರಿಯಲ್ಲಿ ಇತ್ತೀಚೆಗೆ ಏಕವ್ಯಕ್ತಿ ಕಲಾ ಪ್ರದರ್ಶನ ಏರ್ಪಡಿಸಿದ್ದರು.



ಸಂತೋಷ್ ಎಂ. ಪಾಟೀಲರ ಕಲಾಕೃತಿ - 1999

ಶೀರ್ಷಿಕೆ ರಹಿತವಾದ ಅಕ್ರಲಿಕ್ ವರ್ಣ ಮಾಧ್ಯಮದ 20 ಕೃತಿಗಳು ಗ್ರಾಮೀಣ ಜನ (ಜನ ಜೀವನ) ಅಲೆಮಾರಿಗಳ ಜೀವನ, ರೈತರ ಜೀವನ, ಹೀಗೆ ಹಲವಾರು ಜನಪದ ವಿಷಯ ವಸ್ತುಗಳನ್ನೊಳಗೊಂಡಿವೆ. ಇವರ ಕೃತಿಗಳಲ್ಲಿ ಸ್ತ್ರೀಗೆ ಹೆಚ್ಚಿನ ಒತ್ತು ಕೊಟ್ಟಿದ್ದಾರೆ.

ಅಲೆಮಾರಿಗಳು, ಗೊಂದಲಿಗರು, ಜನಸಾಮಾನ್ಯರ ಜೀವನ, ಗ್ರಾಮೀಣ ಕೃಷಿಕರು ಅವರ ಜೀವನ ಶೈಲಿಯಲ್ಲಿ ಪಾಟೀಲರು ಜೀವಂತಿಕೆ ತಂದಿದ್ದಾರೆ. ಇದಕ್ಕೆ ಒಂದು ಕಾರಣವೂ ಉಂಟು, ಪಾಟೀಲರಿಗೆ ತಾವು ಬೆಳೆದ ಪರಿಸರದ ಪ್ರಭಾವ. ಪಾಟೀಲರು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಲಕವಳ್ಳಿ ಗ್ರಾಮದವರು. ಗ್ರಾಮದ ಸುತ್ತಮುತ್ತಲಿನ ಪರಿಸರ ಪ್ರಭಾವದಿಂದ ವಸ್ತು-ವಿಷಯ ವರ್ಣಗಳು ಇವರಿಗೆ ಕೃತಿ ರೂಪಿಸಲು ಪ್ರೇರಣೆ ನೀಡಿವೆ.



ರಾಜಾರವಿವರ್ಮ ರಚಿಸಿದ ವರ್ಣಚಿತ್ರ

ರೈತ ಆತನ ಮಿತ್ರರಾದ ಎತ್ತುಗಳು, ಬೆದರುಬೊಂಬೆ, ಚಕ್ಕಡಿ, ಕೃಷಿ ಉಪಕರಣಗಳು, ಆ ವಾತಾವರಣ, ವೇಶಭೂಷಣ ಉತ್ತಮವಾಗಿ ಸಂಯೋಜನೆಗೊಂಡಿವೆ. ಇನ್ನುಳಿದಂತೆ ನಶಿಸಿ ಹೋಗುತ್ತಿರುವ ಜನಪದರಾದ ಗೊರವಪ್ಪ, ದುರ್ಗಿಮುರ್ಗಿ, ಅಲೆಮಾರಿಗಳ ಜೀವನರೀತಿ, ದೇವದಾಸಿ ಹಾಗೂ ಜೀವನದಲ್ಲಿ ಕನಸು ಕಾಣುವ ಮುಗ್ಧ ಸಂಗಾತಿಗಳು, ಒಂದು ಹೆಣ್ಣು ಇನ್ನೊಬ್ಬ ಹೆಣ್ಣಿನ ಬಗ್ಗೆ ಅಸೂಯೆ ಪಡುತ್ತಿರುವುದು, ಪಂದ್ಯದಲ್ಲಿ ಸೋಲು-ಗೆಲುವು ಹೀಗೆ ಮುಂತಾದ ವಿಷಯಗಳು ಪಾಟೀಲರ ಕೃತಿಗಳಲ್ಲಿ ಅರಳಿವೆ.

ಹೀಗೆ ಪರಿಸರದ ಮಾನವ, ಪ್ರಾಣಿ, ಪಕ್ಷಿ, ಆಕಾಶ, ಸೂರ್ಯ, ಚಂದ್ರ, ನಕ್ಷತ್ರ, ಹಗಲು ಇರುಳುಗಳೊಂದಿಗೆ ಮನೆ, ಗುಡಿಸಲು, ಎಲೆ, ಹೂ, ಬಳ್ಳಿ ಮುಂತಾದ ವರ್ಣಗಳನ್ನು ಸೇರಿಸಿ ಸಂಕೇತಗಳನ್ನಾಗಿ ದುಡಿಸಿಕೊಂಡಿದ್ದಾರೆ.

ಜೀವನದಲ್ಲಿ ಸೋಲು-ಗೆಲುವು, ಸುಖ-ದುಃಖ, ಪ್ರೀತಿ-ವಿಶ್ವಾಸ, ವಂಚನೆ, ನೋವು, ಬದುಕು, ಭಾವನೆ, ಆಸೆ, ಮೂಢನಂಬಿಕೆ, ಬಡತನ, ಗಂಡು-ಹೆಣ್ಣು ಸಂಸಾರದಲ್ಲಿ ಸರಿಸಮಾನತೆಯ ದುಡಿಮೆ ಜೀವನ ಇವೆಲ್ಲವೂ ಪಾಟೀಲರ ಒಟ್ಟು ಕೃತಿಗಳಲ್ಲಿ ಕಂಡು ಬರುತ್ತದೆ.

ವೇದಕಾಲದ ಸಮಾಜದಲ್ಲಿ ಮಹಿಳೆಯರಿಗೆ ಪುರುಷನ ಸರಿಸಮಾನವಾದ ಸ್ಥಾನ, ಪುರಾಣ ಕಾಲದ ಸಮಾಜದಲ್ಲಿ ಮಹಿಳೆಗೆ ಪ್ರಾಮುಖ್ಯತೆ, ಪ್ರಾಚೀನ ಕಾಲದಲ್ಲಿ ಮಹಿಳೆಯು ಆಧ್ಯಾತ್ಮದಲ್ಲಿ ಉನ್ನತ ಸಾಧನೆ, ವೇದ, ಉಪನಿಷತ್, ಪುರಾಣ, ಬ್ರಾಹ್ಮಣ ಸಂಸ್ಕೃತಿಗಳಲ್ಲಿ ಉಲ್ಲೇಖವಾಗಿರುವ ಮಹಿಳೆಯ ಸ್ಥಾನಮಾನಗಳು ನಿರಾಶದಾಯಕವಾಗಿವೆ.

ಆದರೂ ಇಂದು ಪ್ರಪಂಚದ ಎಲ್ಲ ರಂಗಗಳಲ್ಲಿ ಪುರುಷನಿಗೆ ಸರಿಸಮಾನವಾಗಿ ಕಾರ್ಯ ಚಟುವಟಿಕೆ ಸಾಧಿಸಿದ್ದಾಳೆ. ಪಾಟೀಲರ ಕೃತಿಗಳಲ್ಲಿ ಮಹಿಳೆಯು ಇದೆ ರೀತಿ ಕಾಣಿಸುತ್ತಾಳೆ.

''ನಾಗಮಂಡಲ'' ಚಲನಚಿತ್ರದ ಪರಿಣಾಮ ಪಾಟೀಲರ ಕೃತಿಯಲ್ಲಿ ಸೇರಿದೆ. ನಾಗರಹಾವನ್ನು ಕಾಮದ ಸಂಕೇತವಾಗಿ ಬಳಸಿಕೊಂಡಿದ್ದಾರೆ. ಒಬ್ಬ ಹೆಣ್ಣು ಇನ್ನೊಬ್ಬ ಹೆಣ್ಣನ್ನು ಕಂಡು ಅಸೂಯೆ ಪಡುವ ಸಂಕೇತವಾಗಿ ಮೊಸಳೆ, ಸ್ವಪ್ನದಲ್ಲಿ ಸ್ವರ್ಗ ಕಾಣುವ ಶ್ವೇತವರ್ಣದ ಅಶ್ವಮೇಧವೇರಿದ ಯುವಕ- ಯುವತಿ, ಗೋವು ಕಾಮಧೇನು ದೇವತೆಯಾಗಿ, ಎತ್ತು ಶೌರ್ಯ- ಶಕ್ತಿಯಾಗಿ, ಆನೆ ಲಕ್ಷ್ಮೀ ದೇವತೆಯಾಗಿ, ಮಾರ್ಜಾಲ- ಮೊಸಳೆ ಅನಿಷ್ಟ ವಂಚನೆಯ ಸಂಕೇತವಾಗಿ, ಗೂಬೆ ಒಂಟಿತನ, ಕಾಗೆ- ಗಿಳಿ ಮುಂತಾದ ಪ್ರಾಣಿ ಪಕ್ಷಿಗಳು ಪಾತ್ರ ವಹಿಸಿವೆ.

ವರ್ಣಗಳಾದ ಕೆಂಪು, ಹಳದಿ, ನೀಲ, ಹಸಿರು, ಕಿತ್ತಳೆ, ಬಿಳಿ, ಕಪ್ಪು ಕ್ರಮವಾಗಿ ಕೋಪ, ಸಮೃದ್ಧತೆ, ಪವಿತ್ರತೆ, ನೋವು, ದುಃಖ, ಸುಖವನ್ನು ಸೂಚಿಸುತ್ತದೆ.

ಪಾಟೀಲರು ಅಕಾಡೆಮಿಕ್ ನೆಲೆಯಿಂದ ಹೊರಬಂದು ಕ್ಯೂಬಿಸಂ ಪಂಥದಲ್ಲಿ ಮಾನವನನ್ನು ಅರೆನಗ್ನ ರೀತಿಯಲ್ಲಿ ಮುಖವನ್ನು ವಿರೂಪಗೊಳಿಸಿ ದೇಹವನ್ನು ಅಪ್ರಮಾಣದಲ್ಲಿ ರಚಿಸಿದ್ದಾರೆ.

19- 20ನೇ ಶತಮಾನದ ಕ್ಯೂಬಿಸಂ ಪಂಥದ ಪರಿವರ್ತಕ ಸ್ಪೇನ್ ದೇಶದ ಮಹಾನ್ ಕಲಾವಿದ ಪಾಬ್ಲೊ ಪಿಕಾಸೊ ರಚಿಸುತ್ತಿದ್ದ ಶ್ರೀ ಸಾಮಾನ್ಯರ, ಮಧ್ಯಮ ವರ್ಗದವರ, ಬಡವರ, ದುಃಖತಪ್ತರ, ಸ್ತ್ರೀಯರ ಜೀವನ ಹೀಗೆ ಮಾನವೀಯತೆ ಒಳಗೊಂಡ ದಿನನಿತ್ಯದ ಸಮಾಜದಲ್ಲಿ ನಡೆಯುವ ಘಟನೆಗಳ ದೃಶ್ಯಗಳನ್ನು ಪಿಕಾಸೊ ತನ್ನ ಕೃತಿಗಳಲ್ಲಿ ವಿರೂಪಗೊಳಿಸಿ ಚಿತ್ರಿಸುವ ರೂಢಿ ಮಾಡಿಕೊಂಡ. ಪ್ರಕೃತಿ, ಪ್ರಾಣಿ, ಪಕ್ಷಿ, ಸ್ತ್ರೀ ಇವುಗಳನ್ನು ಹೆಚ್ಚಾಗಿ ಬಳಸಿಕೊಂಡಿರುವ ಪಿಕಾಸೊ ಒಂದು ಮಾರ್ಗವನ್ನು ಎರಡು- ಮೂರು ಕಡೆಗಳಿಂದ ನೋಡುವಾಗ ಕಾಣಿಸುವ ವಿವಿಧ ರೂಪಗಳನ್ನು ಒಂದೇ ಮುಖದಲ್ಲಿ ಚಿತ್ರಿಸಿ ತೋರಿಸತೊಡಗಿದರು.

ಪಾಟೀಲರು ಜನಪದ ವಸ್ತು ವಿಷಯ ಆಯ್ದುಕೊಂಡು ಕ್ಯೂಬಿಸಂ ಪಂಥದಲ್ಲಿ ರಚಿಸಿ ವಿರೂಪಗೊಳಿಸಿದ್ದಾರೆ. ಜನಪದ ವಸ್ತು ವಿಷಯವನ್ನು ಅಲಂಕಾರಿಕ ರೀತಿಯಲ್ಲಿ ದುಡಿಸಿಕೊಂಡಿದ್ದರೆ ಸೂಕ್ತವೆನಿಸುತ್ತಿತ್ತು.

ಆಧುನಿಕ ಭಾರತೀಯ ಚಿತ್ರಕಲೆಯಲ್ಲಿ ಅಗ್ರಗಣ್ಯರಾದ ಮತ್ತು ಭಾರತೀಯ ಜನಪದ ಚಿತ್ರಕಲೆಯ ಉದ್ಧಾರಕ ಹಾಗೂ ಗ್ರಾಮೀಣ ಕಲೆಯ ಪರಂಪರೆಯ ಶೈಲಿ ಮತ್ತು ಬಣ್ಣಗಳ ಬಳಕೆಯಲ್ಲಿ ವಿಶಿಷ್ಟತೆ ಪಡೆದಿರುವ ಬಂಗಾಲಿ ಕಲಾವಿದ ಜಾಮಿನಿರಾಯ್ ಅವರ ಕೃತಿಗಳು ಅಲಂಕಾರಿಕ ಚಪ್ಪಟೆ ಆಕೃತಿ, ರೇಖೆಗಳು ಅಪ್ರತಿಮವಾದ ವರ್ಣ ಸಂಯೋಜನೆ ವಿಶಿಷ್ಟವಾದುದು.

ಇದೆ ರೀತಿ ಕನ್ನಡಿಗರಲ್ಲೊಬ್ಬರಾದ ಎ.ಎ. ಅಲಮೇಲಕರ್ ಇವರು ಜನಪದ ವಸ್ತುಗಳ ಸಾಮಾಜಿಕ ಜೀವನ, ಹಳ್ಳಿಗಾಡಿನ ಸ್ತ್ರೀ ಪುರುಷರ ವಿಶೇಷ ಭಾವ ಭಂಗಿಗಳು ಇವರ ಕೃತಿಗಳಲ್ಲಿ ಜೀವಂತವಾಗಿ ಮೂಡಿವೆ. ಈ ಮೇಲಿನ ಮೂವರು ಮಹಾನ್ ಕಲಾವಿದರ ಕೃತಿಗಳಲ್ಲಿಯ ವಸ್ತುಗಳು ಪಾಟೀಲರ ಕೃತಿಗಳಲ್ಲಿವೆ. ಯಾವುದೇ ಕಲಾ ಶಾಲೆಯ ಕಲಾ ವಿದ್ಯಾರ್ಥಿಗಳು ಇತರೆ ಕಲಾಪ್ರದರ್ಶನಗಳನ್ನು ವೀಕ್ಷಿಸುವುದರ ಪರಿಣಾಮದಿಂದಲೂ ಶಿಕ್ಷಕರ ಕೃತಿಗಳ ಪ್ರದರ್ಶನಗಳು ವಿದ್ಯಾರ್ಥಿಗಳ ಮೇಲೆ ಪರಿಣಾಮ ಬೀರುವುದು ಸಹಜವಾದ ಕ್ರಿಯೆ. ಅವರ ಕೃತಿಗಳಲ್ಲಿಯ ಅಂಶಗಳು ವಿದ್ಯಾರ್ಥಿಗಳ ಕೃತಿಗಳಲ್ಲಿ ಕಂಡುಬರುವ ಲಕ್ಷಣಗಳು ಇದ್ದೇ ಇರುತ್ತವೆ.

ಪಾಟೀಲರ ಒಟ್ಟು ಕೃತಿಗಳು ಸಾಮಾನ್ಯ ಜನತೆಗೂ ಸ್ವಲ್ಪ ಮಟ್ಟಿಗೆ ಅರ್ಥಯಿಸುವಂಥ ಕಥಾನಕ ಕೃತಿಗಳಾಗಿವೆ.

ಸಂಯುಕ್ತ ಕರ್ನಾಟಕ: 14.3.99 — ವಿಜಯಾನಂದ ಬಿ. ಕಾಲವಾಡ

# ಕಾರ್ಗಿಲ್ ನೆರವಿಗೆ ಧಾರವಾಡದ ಕಲಾವಿದರು

ಪಾಕ್ ಸೈನಿಕರು ಮತ್ತು ಉಗ್ರಗಾಮಿಗಳನ್ನು ಸೆದೆಬಡಿಯುತ್ತ ಮಡಿದ ಯೋಧರ ಕುಟುಂಬಗಳಿಗೆ ಅಳಿಲು ಕಾಣಿಕೆ ನೀಡಲು ಧಾರವಾಡದ ಸುಮಾರು 13 ಮಂದಿ ಕಲಾವಿದರು ಮುಂದಾಗಿದ್ದಾರೆ. ಅವರು ತಮ್ಮ ಒಟ್ಟು 25 ಕೃತಿಗಳನ್ನು ಪ್ರದರ್ಶನಕ್ಕಿಟ್ಟಿದ್ದಾರೆ. ''ಆರ್ಟ್ ಹೋಮೆಜ್'' ಅಡಿಯಲ್ಲಿ ಜುಲೈ 3ರಿಂದ 11ರ ವರೆಗೆ ಧಾರವಾಡದ ಸರಕಾರಿ ಆರ್ಟ್ ಗ್ಯಾಲರಿಯಲ್ಲಿ ಈ ಪ್ರದರ್ಶನ ನಡೆಯುತ್ತಿದೆ.

ಪ್ರಖ್ಯಾತ ಕಲಾವಿದರಾದ ಆರ್ಯ ರಾವಬೈಲರಿಂದ ಹಿಡಿದು ಕಿರಿಯ ಕಲಾವಿದರ ತನಕ ಪಾಲ್ಗೊಂಡ ಈ ಪ್ರದರ್ಶನ ಕೊಂಡುಕೊಳ್ಳುವವರನ್ನು ಸೆಳೆಯುವಲ್ಲಿಯೂ ಯಶಸ್ವಿಯಾಗಿದೆ.

ಪಶ್ಚಿಮ ವಲಯ ಐ.ಜಿ.ಪಿ. ಬಿ.ವೈ. ಭೋಸಲೆ ಚಿತ್ರಕಲಾವಿದರೂ ಹೌದು. ಬಿಡುವಿಲ್ಲದ ಪೋಲೀಸ್ ಇಲಾಖೆ ಕಾರ್ಯದ ನಡುವೆ ಚಿತ್ರಕಲೆಯ ಹವ್ಯಾಸವನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಅವರ ಜಲವರ್ಣದ ''ಬಿಗಿನಿಂಗ್ ಆಫ್ ದ ಡೇ'' ಕೃತಿ ಅವರ ಕಲಾವಂತಿಕೆಯನ್ನು ಸಾಬೀತುಪಡಿಸಿದೆ. ಚುಮು ಚುಮು ಬೆಳಗು ಮುಂಜಾವು ಹೊತ್ತಿನಲ್ಲಿ ಬಾಗಿಲು ತೆರೆಯುವ ಪೋರಿ ಚಿತ್ರದ ನಿರ್ವಹಣೆ ಅದ್ಭುತವಾಗಿದೆ. ಇವರದೇ ಇನ್ನೊಂದು ಕೃತಿ ''ಫ್ರೀಡಮ್'' ಈ ಎರಡು ಕೃತಿಗಳೂ ಅದ್ಭುತವಾಗಿವೆ.



ಪ್ರದರ್ಶನದ ಒಂದು ಕೃತಿ - 1999

ಮಧು ದೇಸಾಯಿ ಅವರ ''ಅನ್‌ಟೈ ಟಲ್ಡ್'' ಕೃತಿ ಬಾಬರಿ ಮಸೀದಿ ಧ್ವಂಸಗೊಳ್ಳುವ ಆಶಯವನ್ನು ಅಭಿವ್ಯಕ್ತಿಸುತ್ತದೆ.

ಜನಪದ ನಂಬಿಕೆಯ ಎರಡು ಕೃತಿಗಳು ಡಿ.ಕೆ. ಕಾಮತರಿಂದ ರಚಿತವಾಗಿವೆ. ಜನಪದ ಹಾಡುಗಾರರು ಅಮೂರ್ತವಾಗಿ ಕಾಣಿಸಿಕೊಳ್ಳುವ ''ಕಿಂದರಜೋಗಿ'' ಉತ್ತಮ ಕೃತಿ. ''ದುರಗ ಮುರಗಿ'' ಕೃತಿಯು ಇಂದು ನಗರ ಬದುಕಿಗೆ ಮಾರು ಹೋಗಿ ನಶಿಸುತ್ತಿರುವ ಗ್ರಾಮೀಣ ಜನರನ್ನು, ಅವರ ದೈವೀ ನಂಬಿಕೆಯ ಬಾಳುವೆಯನ್ನು ದಾಖಲಿಸುವ ಕೃತಿಯಾಗಿದೆ.

ಮಹಿಳೆಯ ಮನೋಧಾರಣೆ ಸುತ್ತ ಸಾಗುವ ಎರಡು ಪುಟ್ಟ ಮಿಶ್ರ ಮಾಧ್ಯಮದ ಕೃತಿಗಳು ಖ್ಯಾತ ಕಲಾವಿದೆ ಗಾಯತ್ರಿ ದೇಸಾಯಿಯವರದು. ಎರಡು ಕೃತಿಗಳ ತಲೆಬರೆಹ 'ಬಿಟವೀನ್ ಲೈನ್ಸ್' ಎಂದಿದೆ.

ಲೋಹಿತ ನಾಯ್ಕರ ಅವರ ಎರಡು ಕೃತಿಗಳು ಬೇರೆ ಬೇರೆ ವಸ್ತುವನ್ನು ಧ್ವನಿಸುತ್ತವೆ. ಒಂದರಲ್ಲಿ ಹಾರುವ ಬೃಹತ್ 'ಚಿಟ್ಟೆ'ಯನ್ನು ಚಿತ್ರಿಸಿದ್ದರೆ, ಇನ್ನೊಂದರಲ್ಲಿ ತಮ್ಮದೇ ವಿಶಿಷ್ಟ ನಿರೂಪಣೆಯಲ್ಲಿ 'ಲ್ಯಾಂಡ್‌ಸ್ಕೇಪ್'ನ್ನು ಅಭಿವ್ಯಕ್ತಿಸಿದ್ದಾರೆ. ರೇಣುಕಾ ಮಾರ್ಕಾಂಕೆ ಇತ್ತೀಚಿಗೆ 'ಫೇಸಸ್' ಸರಣಿಯಲ್ಲಿ ಮನುಷ್ಯನ ಮುಖಾಭಿವ್ಯಕ್ತಿಯನ್ನು ತಮ್ಮ ಕಲೆಗೆ ವಿಷಯವಾಗಿರಿಸಿಕೊಂಡು ಬಿಂಬಿಸಿದ್ದಾರೆ. ಇಲ್ಲಿಯ ಫೇಸ್ 89 ಮತ್ತು 90 ಕೃತಿಗಳಲ್ಲಿ ತ್ರಿಮುಖ ಮತ್ತು ಏಕಮುಖಗಳು ನಮ್ಮನ್ನು ಚಿಂತನೆಗೆ ಕೊಂಡೊಯ್ಯುತ್ತವೆ. ಇದೇ ತರಹದ ಎಸ್.ಎಂ. ಪಾಟೀಲರ ''ಕಂಪೋಸಿಷನ್'' ಶೀರ್ಷಿಕೆಯ ಎರಡೂ ಕೃತಿಗಳು ಮಾನವ ಸ್ವಾಭಾವಿಕ ಚಟುವಟಿಕೆಯನ್ನೇ ಅಭಿವ್ಯಕ್ತಿಯ ಪ್ರಧಾನ ಆಶಯವಾಗಿ ಸ್ವೀಕರಿಸಿವೆ.

ಲಿನೋಕಟ್ ಮತ್ತು ಡ್ರೈ ಪೇಸ್ಟಲ್ಲಿ ಮೂಡಿದ ಎಸ್.ಎಂ. ಲೋಹಾರ ಅವರ ಕೃತಿಗಳು 'ಟ್ರೆಡಿಷನ್ 1,2' ಸಾಂಪ್ರದಾಯಿಕ ನೆಲೆಯ ಮುಖ್ಯ ಧೋರಣೆಯನ್ನು ಧ್ವನಿಸುವಂತಹವು. ಪೂಜೆ, ಅರ್ಚನೆಯೊಂದಿಗಿನ ಮನುಷ್ಯ ಸಂಪ್ರದಾಯ ಇಲ್ಲಿ ಮೂಲ ಗುಣವಾಗಿದೆ. ಸ್ವಂತ ಕಲಿಕೆಯ ಬಿ. ಮಾರುತಿ ಈ ಪ್ರದರ್ಶನದಲ್ಲಿಯ ಇನ್ನೊರ್ವ ಕಲಾವಿದ. ಯಾವುದೇ 'ಇಸಂ' ಅನ್ನು ಗಣನೆಗೆ ತೆಗೆದುಕೊಳ್ಳದೇ ತನ್ನ ಚಿತ್ತಕ್ಕೆ ಹೊಳೆದುದನ್ನು ಕ್ಯಾನವಾಸಿನ ಮೇಲೆ ನಿರೂಪಿಸುವ ಎದೆಗಾರಿಕೆಯ ಕಲಾವಿದ, ಮಾರುತಿ 'ಸಿಂಗಿಂಗ್ ರಾಕ್' ಅಡಿಯಲ್ಲಿ ಹಂಪೆಯ ಕಲ್ಲುಗಳಿಗೆ ಚೆಂದದ ಚೆಲುವನ್ನು ತಂದಿಟ್ಟು ಮೋಹಕತೆಯನ್ನು ನೀಡಿದ್ದಾರೆ.

ಆರ್ಯ ಅವರ 'ಸ್ಟಾಂಪ್' ಮತ್ತು 'ಪೋಸ್ಟ್ ಕಾರ್ಡ್' ವಿಭಿನ್ನ ನೆಲೆಯಲ್ಲಿ ನಿಂತು ಆಲೋಚಿಸುವಂತೆ ಮಾಡುವಂತವು. ರಾವಬೈಲ ಅವರ ಎರಡು 'ಸ್ಟಿಲ್‌ಲೈಫ್' ಕೃತಿಗಳು ಕಲಾತ್ಮಕವಾಗಿವೆ. 'ಕಾಂಕ್ರಿಟ್ ಜಂಗಲ್' ಮತ್ತು 'ನಿಸರ್ಗ' ಚಿತ್ರದ ಎಂ.ಆರ್. ಬಾಳೀಕಾಯಿ ಅವರು ಜಲವರ್ಣದಲ್ಲಿ ಕಾಡು ನಾಡಿನ ತತ್ವವನ್ನು ಈ ಸರಳ ನಿರೂಪಣೆಯಲ್ಲಿ ಹೇಳುತ್ತಾರೆ.

ಪ್ರಜಾವಾಣಿ : 10.7.99

ಡಿ.ಎಸ್. ಚೌಗಲೆ

# ಯುವ ಕಲಾವಿದರ ಒಡಕು ದಾರಿ

ದೃಗ್ಗೋಚರ ಜಗತ್ತಿನ ವಾಸ್ತವತೆಯನ್ನು ಆಧರಿಸಿಯೋ ಹೀರಿಯೋ ಕಲ್ಪಿಸಿಯೋ ಇರುವ ಇನ್ನೊಂದು ಬಗೆಯ ಮೌಲ್ಯಗಳ ನಿಷ್ಠೆಯನ್ನು ತೋರ್ಪಡಿಸುವ ಕಲಾರಚನೆಗಳು ಅಮೂರ್ತವೆನಿಸಿಕೊಳ್ಳುತ್ತವೆ. ಆದರೆ ಆರಂಭದಿಂದಲೂ ಶ್ರುತಿಗೊಳ್ಳದ ಸಂಗೀತದಂತೆ ದೃಗ್ಗೋಚರ ಸ್ಥಿತಿಯ ರಚನೆಗಳಲ್ಲಿ ಅಭ್ಯಾಸಗೊಳ್ಳದ ಕೈಗಳು ಹಠಾತ್ತಾಗಿ ಅಮೂರ್ತ ರಚನೆಗಳಿಗೆ ಇಳಿದಾಗ ರೂಪುಗೊಳ್ಳುವ ಕಲಾಕೃತಿಗಳು ಯಾವ ಪುರುಷಾರ್ಥವನ್ನು ಸಾಧಿಸಬಲ್ಲವು ? ಕಲಾಶಿಕ್ಷಣದಲ್ಲಿ ಇಂದು ವಿದ್ಯಾರ್ಥಿಗಳು ವಾಸ್ತವ ರಚನೆಗಳಲ್ಲಿ ಪರಿಣತರಾಗುವ ಮೊದಲೆ ತಮ್ಮ ದೃಗ್ಗೋಚರ ಪ್ರಜ್ಞೆಯನ್ನು ಕಳೆದುಕೊಂಡು ಅಂಧಾನುಕರಣೆಯಿಂದ, ಕ್ಷಿಪ್ರ ಪ್ರಸಿದ್ಧಿಗಿಟ್ಟಿಸಿಕೊಳ್ಳುವ ಕನಸು ಕಾಣುತ್ತಾ ಅಮೂರ್ತ ರಚನೆಗಿಳಿಯುತ್ತಿರುವ ಸ್ಥಿತಿ ಶೋಚನೀಯ.

ಯಾವುದೇ ಶಿಕ್ಷಣ ಅದನ್ನು ಅವಲಂಬಿಸಿರುವ ವ್ಯಕ್ತಿಯ ಬದುಕನ್ನು ಶ್ರೀಮಂತಗೊಳಿಸಲಿಕ್ಕಾಗಿಯೇ ಇರುವುದು. ಆ ಶಿಕ್ಷಣದಿಂದ ಅವನ ಜೀವನಕ್ಕೆ ಅನ್ನ ಮಾತ್ರವಲ್ಲದೆ ಜೇನಿನ ಮಧುರತೆಯೂ ಸಿಗಬೇಕು. ಆದರೆ ಇಂದಿನ ಕಲಾ ಶಿಕ್ಷಣ ವ್ಯವಸ್ಥೆಯಲ್ಲಿ ಕಲಿತ ವಿದ್ಯಾರ್ಥಿಗಳು ಎಷ್ಟರ ಮಟ್ಟಿಗೆ ತಮ್ಮ ಬದುಕಿನ ಆರ್ಥಿಕ ಸ್ಥಿರತೆಯನ್ನು ಕಾಯ್ದುಕೊಳ್ಳಲು ಸಾಧ್ಯವಾಗುತ್ತದೆ ಎನ್ನುವುದು ಮುಖ್ಯ ಪ್ರಶ್ನೆ. ಕಲಾಶಾಲೆಗಳಲ್ಲಿ ಡಿಪ್ಲೊಮಾ ಅಥವಾ ಡಿಗ್ರಿ ಮುಗಿಸಿ ಹೊರ ಬಂದಂಥ ಪದವೀಧರ ಕಲಾವಿದರ ಬದುಕಿನ ಕ್ರಮ, ಆರ್ಥಿಕ ಸ್ಥಿರತೆಗಳನ್ನು ಗಮನಿಸಿದಾಗ ಇಂದಿನ ಕಲಾಶಿಕ್ಷಣದ ಕ್ರಮವನ್ನು ಪ್ರಶ್ನಿಸುವಂತಾಗುತ್ತದೆ. ಜೊತೆಗೆ ಕಲಾ ಪ್ರಪಂಚದ ಭವಿಷ್ಯದ ಬಗ್ಗೆಯೂ ಚಿಂತಿಸುವಂತಾಗುತ್ತದೆ.

ಮನೆಯವರ ವಿರೋಧ ಕಟ್ಟಿಕೊಂಡು ಕಲೆಯನ್ನು ನಂಬಿ ಬಂದು, ಕಲಾ ಶಾಲೆಗೆ ಸೇರಿ ತಮ್ಮ ಬದುಕನ್ನು ರೂಪಿಸಿಕೊಳ್ಳುವ, ಬಣ್ಣ ಬಣ್ಣದ ಕನಸನ್ನು ಹೊತ್ತಿರುವ ಯುವ ಕಲಾವಿದರು ಪ್ರಾರಂಭದಲ್ಲಿಯೇ ಅಮೂರ್ತ ರಚನೆಯ ಗೀಳಿಗಿಳಿದು ಸೃಜನಶೀಲತೆಯ ನೆಪದಲ್ಲಿ ವಾಸ್ತವ ಕಲಾರಚನೆಗಳನ್ನು ನಿರಾಕರಿಸಿ, ಅಂತೂ ಒಂದು ಪದವಿಯನ್ನು ಪಡೆದು ಕಲಾಶಾಲೆಯಿಂದ ಹೊರ ಬಂದಾಗ ತಮ್ಮ ಕೈಯಲ್ಲಿ ಎಂತಹ ಕಸುವು ಇದೆ? ಅದರ ಸಾಧ್ಯತೆಗಳೇನು? ಮುಂದುವರಿಯಲು ಯಾವ ದಾರಿಗಳಿವೆ ಎಂಬಿತ್ಯಾದಿ ಯೋಚನೆಗೈದಾಗ ಅವರು ಮಂಕಾಗಿ ಬಿಡುತ್ತಾರೆ. ತಮ್ಮ ಶಿಕ್ಷಣದ ಅವಧಿಯಲ್ಲಿ ತಾವು ಅಸಡ್ಡೆಗೈದ ಅಭ್ಯಾಸಗಳೇ ತಮಗೀಗ ಜೀವನಾಧಾರವಾಗುವುದೆಂಬ ಅರಿವು ಮೂಡಿದಾಗ ಅವರು ಗೊಂದಲಗೊಳ್ಳುತ್ತಾರೆ. ಈ ಗೊಂದಲಕ್ಕೆ

ಕಾರಣವೆಂದರೆ ಇವರಲ್ಲಿ ಅನೇಕರಿಗೆ ಕಲೆಯ ಮಾಧ್ಯಮವನ್ನು ಸಾಹಿತ್ಯದ ಮೂಲಕ ಅಥವಾ ಭಾಷಣದ ಮೂಲಕ ಗ್ರಹಿಸುವಂತಹ ಅಭ್ಯಾಸ ಹೆಚ್ಚಾಗಿ ಕಲಾಭ್ಯಾಸಗಳಾದ ರೇಖಾಚಿತ್ರ, ಸ್ಕೆಚ್, ವರ್ಣ ಸಂಯೋಜನೆಯ ಕುಶಲತೆ, ದೃಶ್ಯಭಾಷೆಯಲ್ಲಿ ಅಭಿವ್ಯಕ್ತಿಸುವ ಸಾಮರ್ಥ್ಯ ಕಡಿಮೆಯಾಗಿರುತ್ತದೆ. ಹೀಗೆ ಅಸಹಾಯಕರಾದ ಅವರು ಅಮೂರ್ತ ಚಿತ್ರಗಳನ್ನೇ ರಚಿಸಿ ಆ ಬಗ್ಗೆ ನಿರಂತರ ಕೊರೆಯಬಹುದು. ಇಲ್ಲವೇ ಶಾಂತಿನಿಕೇತನ, ಬರೋಡದಂತಹ ಕಲಾಶಾಲೆಗಳಿಗೆ ಹೋಗಿ ಉನ್ನತ ವ್ಯಾಸಂಗ ಮುಗಿಸಿ (ಅಮೂರ್ತ ಕಲೆ) ಯಥಾ ಪ್ರಕಾರ ಕಲಾ ಶಾಲೆ/ಕಾಲೇಜುಗಳಲ್ಲಿ ಲೆಕ್ಚರರ್‌ಗಳಾಗಿ ಬೋಧಿಸಬಹುದು.

ಇದು ಸಾಧ್ಯವಾಗದವರ ಪಾಡೇನು? ಪ್ರತಿವರ್ಷ ಡಿಗ್ರಿ, ಡಿಪ್ಲೊಮಾ ಗಳಿಸಿ ಕಲಾ ಶಾಲೆಗಳಿಂದ ಹೊರಬರುವ ವಿದ್ಯಾರ್ಥಿಗಳಲ್ಲಿ ಶೇಕಡಾ ಅರುವತ್ತರಷ್ಟು ವಿದ್ಯಾರ್ಥಿಗಳು ಇಂದು ನಿರುದ್ಯೋಗಿಗಳಾಗಿ ಅಲೆದಾಡುತ್ತಿದ್ದಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇವರಲ್ಲಿ ಶೇ. ಹತ್ತರಷ್ಟು ವಿದ್ಯಾರ್ಥಿಗಳು ಮೇಲ್ವರ್ಗದ ಜನರಾದರೆ ಇನ್ನುಳಿದವರು ಮಧ್ಯಮ ವರ್ಗದವರು. ಆರ್ಥಿಕವಾಗಿ ತಾವು ಕಲಿತ ವಿದ್ಯೆಯನ್ನೇ ಅವಲಂಭಿಸಿರುವವರು. ಇವರಲ್ಲಿ ಕೆಲವರು ಸರಕಾರಿ ಕೆಲಸಕ್ಕೆ ಸೇರಿಕೊಂಡರೆ (ಈಗೀಗ ಸರಕಾರಿ ಕೆಲಸಕ್ಕೆ ನೇಮಕ ಅತಿ ವಿಳಂಬವಾಗುತ್ತಿದೆ), ಇನ್ನುಳಿದವರು ತಾವು ಕಲಿತ ವಿದ್ಯೆಯಿಂದ ಹೇಗೆ ಹಣಗಳಿಸಬಹುದು ಎಂಬ ಚಡಪಡಿಕೆಯಲ್ಲಿರುತ್ತಾರೆ. ಆಗ ಅವರ ನೆರವಿಗೆ ಬರುವುದು ಕ್ರಾಫ್ಟ್ ಅಥವಾ ಯಥಾವತ್ ಚಿತ್ರ ರಚನೆ ಮಾತ್ರ. ಇವುಗಳ ಅಭ್ಯಾಸವಿಲ್ಲದೆ ಸೃಜನಶೀಲತೆ ಸಾಧ್ಯವಿಲ್ಲ. ವಿದ್ಯಾರ್ಥಿಗಳು ಕಲಾಭ್ಯಾಸ ಮಾಡುತ್ತಿರುವಾಗ ಬೌದ್ಧಿಕ ಆಲೋಚನೆಗಳೊಂದಿಗೆ ಬೇಕಾದ ಪ್ರಾಕ್ಟಿಕಲ್ ಅಂಶಗಳ ಬಗ್ಗೆಯೂ ಆಸಕ್ತಿ ವಹಿಸಿದ್ದಾದರೆ ಅವರು ಉತ್ತಮ ಭವಿಷ್ಯವನ್ನು ನಿರೀಕ್ಷಿಸಬಹುದು. ಕಲಾ ಶಾಲೆಗಳಲ್ಲಿ ಪ್ರಾಮಾಣಿಕವಾಗಿ ಕಲಿತ ವಿದ್ಯಾರ್ಥಿಗಳಿಗೆ ಒಂದು ಒಳ್ಳೆಯ ಡ್ರಾಯಿಂಗ್ ಅಥವಾ ರೇಖಾಚಿತ್ರ ಮಾಡುವುದಕ್ಕೆ ಬಂದರೂ ಸಾಕು ಅವರ ಬದುಕು ಸುಗಮವಾಗಿ ಸಾಗಬಹುದು. ಅದಕ್ಕೆ ಸಮಾಜದಲ್ಲಿ ಸಾಕಷ್ಟು ಅವಕಾಶಗಳಿವೆ. ಕಂಪೆನಿಗಳಲ್ಲಿ, ಜಾಹೀರಾತು ಸಂಸ್ಥೆಗಳಲ್ಲಿ, ವಾಣಿಜ್ಯ ಕಲಾಸಂಸ್ಥೆಗಳಲ್ಲಿ, ಪತ್ರಿಕೆಗಳಲ್ಲಿ ಹೀಗೆ ಹಲವಾರು ಉದ್ಯೋಗಾವಕಾಶಗಳಿರುತ್ತವೆ. ಸ್ವಂತ ಉದ್ಯೋಗವನ್ನೂ ಕಂಡುಕೊಳ್ಳಬಹುದು.

ಸಮಾಜದ ಉನ್ನತಿಗಾಗಿ, ಬದಲಾವಣೆಗಾಗಿ ಕಲಾಕೃತಿಗಳನ್ನು ರಚಿಸಿ ಶ್ರೇಷ್ಠತೆ ಪಡೆದಿರುವ ಕಲಾವಿದರ ಬಗ್ಗೆ ಓದಿ, ಕೇಳಿ ತಾವೂ ಅವರಂತೆ ಆಗಬೇಕೆಂದು ಬಯಸಿದರೂ ಪ್ರಯತ್ನಶೀಲರಾಗದೆ, ಯದ್ವಾತದ್ವ ಕಲಾಕೃತಿ ರಚಿಸಿ ಶ್ರೇಷ್ಠತೆಗಿಟ್ಟಿಸಿಕೊಳ್ಳುವ ಬಗ್ಗೆ ಚಿಂತಿಸಿದರೆ ಫಲವಿಲ್ಲ. ಶ್ರೇಷ್ಠತೆ ಹೊಟ್ಟೆ ತುಂಬಿಸುವುದಿಲ್ಲ ಎಂಬ ಮಾತಂತೂ ನಿಜ. ಇದನ್ನು ಕಲಾ ವಿದ್ಯಾರ್ಥಿಗಳಿಗೆ ಕಲಿಕೆಯ ಹಂತದಲ್ಲಿಯೇ ಶಿಕ್ಷಕರು ಮನದಟ್ಟಾಗಿಸಬೇಕು.

ನಶಿಸುತ್ತಿರುವ ವಾಸ್ತವ ಕಲಾಪ್ರಜ್ಞೆಯ ಬಗ್ಗೆ ನಮ್ಮಲ್ಲಿ ಹಲವಾರು ಚಿಂತಕರು, ವಿಮರ್ಶಕರು ಆಗಾಗ್ಗೆ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುತ್ತಾರೆ. ''ಕ್ಯಾನ್ವಾಸ್'' ಪತ್ರಿಕೆಯ ಎಂ.ಎಸ್. ಮೂರ್ತಿಯವರು ಈ ಬಗ್ಗೆ ಹೆಚ್ಚು ಕಾಳಜಿ ವಹಿಸಿ ಬರೆಯುತ್ತಾರೆ. ''ತರಂಗ'' ವಾರ ಪತ್ರಿಕೆಯ ಸಂಪಾದಕರೂ ಈ ಬಗ್ಗೆ ಹಲವಾರು ಲೇಖನಗಳನ್ನು

ಬರೆದಿದ್ದಾರೆ. ಇವುಗಳನ್ನೆಲ್ಲಾ ಓದಿ ಅರಗಿಸಿಕೊಂಡು ತಾನೆಲ್ಲಿ ತಪ್ಪುತ್ತಿದ್ದೇನೆ ಎಂಬುದರ ಬಗ್ಗೆ ಸ್ವಯಂ ಚಿಂತನೆ ಮಾಡಿಕೊಳ್ಳುವುದು ಉತ್ತಮ ಕಲಾವಿದನ ಲಕ್ಷಣವಾಗಿರುತ್ತದೆ. ಬದಲಿಗೆ ಬರೆದವರನ್ನೇ ದೂರುವುದು ಧೂರ್ತತನವಾಗುತ್ತದೆ.

ಒಟ್ಟಿನಲ್ಲಿ ನಾವು ಮೊದಲು ವಾಸ್ತವ ಕಲಾಪ್ರಜ್ಞೆಯುಳ್ಳ ಚಿತ್ರಕಲಾವಿದರನ್ನು ಸೃಷ್ಟಿಸೋಣ. ಅನಂತರ ಬೇಕಾದಲ್ಲಿ ಅವರು ಮರಿಪಿಕಾಸೋಗಳಾಗಲಿ. ಈ ಬಗ್ಗೆ ನಮ್ಮ ಕಲಾವಿದ್ಯಾರ್ಥಿಗಳೂ ಯೋಚಿಸುವಂತಾಗಲಿ.

ಉದಯವಾಣಿ : 16.7.99 **ಉಪಾಧ್ಯಾಯ ಮೂಡುಬೆಳ್ಳಿ**

# ಕಲೆ ಮತ್ತು ಅಶ್ಲೀಲತೆ

ಅಶ್ಲೀಲವಾದುದನ್ನು ಪ್ರದರ್ಶಿಸುವುದು, ಬರೆಯುವುದು, ಪ್ರಕಟಿಸುವುದು ಎಲ್ಲವೂ ಶಿಕ್ಷಾರ್ಹವೆಂದು ಜಗತ್ತಿನ ಎಲ್ಲ ದೇಶಗಳು ಶಾಸನ ಮಾಡಿರುವುದಾದರೂ 'ಅಶ್ಲೀಲ' ಎಂದರೆ ಏನೆಂಬುದನ್ನು ಸ್ಪಷ್ಟವಾಗಿ ಹೇಳಿಲ್ಲ. ಸಾಮಾನ್ಯವಾಗಿ ಅಶ್ಲೀಲವೆಂಬುದು ನಗ್ನತೆ ಹಾಗೂ ಲೈಂಗಿಕ ವಿಚಾರಗಳಿಗೆ ಬಹುಮಟ್ಟಿಗೆ ಸಂಬಂಧಿಸಿದಂತೆ ತೋರುತ್ತದೆ. ಈಗಿನ ಪರಿಸ್ಥಿತಿಯಲ್ಲಿ ಕಾಮಪ್ರಚೋದನೆ ಮಾಡುವಂತಹ ವಸ್ತು ಅಥವಾ ಸಂಗತಿಗಳಿಗೆ ಬಹುತೇಕ ಅಶ್ಲೀಲ ಎಂಬುದು ಅನ್ವಯಿಸುತ್ತಿದೆ. ನ್ಯಾಯಾಲಯಗಳು ಸಾಮಾನ್ಯವಾಗಿ ಕೊಡುತ್ತಿರುವ ತೀರ್ಪನ್ನು ಅವಲೋಕಿಸಿದರೆ, 'ಎಂತಹ ವಸ್ತು ಅಥವಾ ವಿಷಯಗಳನ್ನು ನೋಡುವುದರಿಂದ, ಕೇಳುವುದರಿಂದ, ಓದುವುದರಿಂದ ಅಪಕ್ವ ಮತ್ತು ಅಪ್ರಬುದ್ಧ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವಾಗಿ ಅನೀತಿಗೆ ಪ್ರಚೋದನೆಯುಂಟಾಗುತ್ತದೋ ಅಂತಹ ವಸ್ತು ಅಥವಾ ವಿಷಯ ಅಶ್ಲೀಲವೆನಿಸುತ್ತದೆ'. ಒಂದು ವಸ್ತು ಅಥವಾ ವಿಷಯ ಅಶ್ಲೀಲವಾಗಿದೆಯೆ? ಇಲ್ಲವೆ ಎಂಬುದನ್ನು ನಿರ್ಧರಿಸುವಾಗ ಅದು ಯಾರ ಗಮನಕ್ಕೆ ಬಂದಿರುತ್ತದೆಯೋ ಅವರ ವಯಸ್ಸು, ಮನಸ್ಸು, ಸ್ಥಳ, ಆಚಾರ-ವಿಚಾರ, ಜೀವನಪದ್ಧತಿ, ಮತಧರ್ಮ ಇವೆಲ್ಲವನ್ನೂ ಪರಿಶೀಲಿಸಬೇಕಾಗುತ್ತದೆ.

ಆದರೆ ಶಾಸನಗಳು ಕೆಲವು ವಿಷಯಗಳನ್ನು ಅಶ್ಲೀಲತೆಯಿಂದ ಮುಕ್ತಗೊಳಿಸಿವೆ. ಅವುಗಳೆಂದರೆ ಪ್ರಾಚೀನ ಶಿಲ್ಪಕಲೆ, ಚಿತ್ರಕಲೆ ಹಾಗೂ 'ಕಲಾಕೃತಿ' ಎಂಬ ಹೆಸರಿಗೆ ಅರ್ಹವಾದ ಎಲ್ಲ ಚಿತ್ರ, ಶಿಲ್ಪಗಳು, ಬರವಣಿಗೆಗಳು, ಕಾವ್ಯಗಳು ಎಷ್ಟೇ ಲೈಂಗಿಕ ವಿಚಾರಕ್ಕೆ ಸಂಬಂಧಿಸಿದ್ದಾದರೂ ಅವನ್ನು ಅಶ್ಲೀಲವೆನ್ನಲಾಗುವುದಿಲ್ಲ. ಅದೇ ರೀತಿ ನಮ್ಮ ಪ್ರಾಚೀನ ಕವಿಗಳು ತಮ್ಮ ಬರಹಗಳಲ್ಲಿ ವರ್ಣಿಸಿರುವ ಶೃಂಗಾರ ಚೇಷ್ಟೆಗಳು ಕಾವ್ಯದ ಪರಿಮಿತಿಯೊಳಗೆ ಅಶ್ಲೀಲವೆನಿಸುವುದಿಲ್ಲ. ಹಾಗೆಯೇ ಕೆಲವು ದೇವತಾಮೂರ್ತಿಗಳು, ಚಿತ್ರಗಳು ಹೇಗಿದ್ದರೂ ಅಶ್ಲೀಲವಾಗುವುದಿಲ್ಲ. ಶ್ರೀ ಕೃಷ್ಣ-ಗೋಪಿಯರ ರಾಸಕೇಳಿಯ ಚಿತ್ರಗಳು; ಬೇಲೂರು, ಖಜುರಾಹೋದ ಶಿಲಾಬಾಲಿಕೆಯರು, ಗೋಮಟೇಶ್ವರ ವಿಗ್ರಹ, ಲಜ್ಜಾಗೌರಿಶಿಲ್ಪ ಮುಂತಾದುವುಗಳನ್ನು ಅಶ್ಲೀಲವೆಂದು ಭಾವಿಸಲಾಗುವುದಿಲ್ಲ. ಅದೇ ರೀತಿ ಲೈಂಗಿಕ ವಿಜ್ಞಾನಕ್ಕೆ ಸಂಬಂಧಿಸಿದ ಗ್ರಂಥಗಳು, ವೈಜ್ಞಾನಿಕ ತಿಳಿವಳಿಕೆ ಕೊಡುವ ಬರಹಗಳು ಅಶ್ಲೀಲವೆನಿಸುವುದಿಲ್ಲ. ಅಶ್ಲೀಲವಾಗಿದೆಯೇ ಇಲ್ಲವೇ ಎಂಬುದಕ್ಕೆ ಒಂದು ಪರೀಕ್ಷೆಯೆಂದರೆ ಅದು ಅಪವಿತ್ರ, ಅಯೋಗ್ಯ, ಅನಾರೋಗ್ಯಕರವಾದ ಕಾಮ ಪ್ರಚೋದನೆಯನ್ನುಂಟು ಮಾಡುತ್ತದೆಯೇ ಇಲ್ಲವೇ ಎಂಬುದರ ನಿರ್ಧಾರವಾಗಿರುತ್ತದೆ.

ಅಶ್ಲೀಲತೆಯ ಪ್ರಮಾಣ ಒಂದು ಮಾಧ್ಯಮದಿಂದ ಇನ್ನೊಂದಕ್ಕೆ ವ್ಯತ್ಯಾಸಗೊಳ್ಳುತ್ತಾ ಹೋಗುತ್ತದೆ. ಕಲ್ಲಿನಿಂದ ರಚನೆಯಾದ ನಗ್ನ ಅಥವಾ ಅರೆನಗ್ನ ಮಾನವನ ಶಿಲ್ಪ ಕಲಾಕೃತಿಯೊಂದನ್ನು ನೋಡಿದಾಗ ಅಶ್ಲೀಲತೆಯು ಜಡತ್ವವನ್ನು ಪಡೆದು ಅದರ ಪ್ರಮಾಣವು ನಗಣ್ಯವಾಗಿರುತ್ತದೆ. ಅದೇ ನಗ್ನತೆ ಕಲ್ಲನ್ನು ಹೊರತುಪಡಿಸಿ ಇನ್ನಿತರ ಮಾಧ್ಯಮದ ಶಿಲ್ಪ ಅಥವಾ ಬೊಂಬೆಯಾದಾಗ ಅಲ್ಲಿ ಅಶ್ಲೀಲತೆಯ ಪ್ರಮಾಣ ಕೊಂಚ ಏರಬಹುದು. ಅದೇ ನಗ್ನತೆ ಒಂದು ಚಿತ್ರವಾಗಿ ರಚನೆಯಾದಾಗ ಅಶ್ಲೀಲತೆಯ ಪ್ರಮಾಣ ಮತ್ತು ಸ್ವಲ್ಪ ಹೆಚ್ಚಾಗಬಹುದು. ಅದೇ ನಗ್ನತೆ ಒಂದು ನೈಜ ಶರೀರದ ಛಾಯಾ ಚಿತ್ರ (ಫೋಟೋ)ವಾದಾಗ ಅಶ್ಲೀಲತೆಯ ಪ್ರಮಾಣ ಇನ್ನೂ ಹೆಚ್ಚುತ್ತದೆ. ಅದೇ ನಗ್ನತೆ ಒಂದು ಚಲನ ಚಿತ್ರವಾದರೆ ಅಶ್ಲೀಲತೆಯು ಮತ್ತೂ ಹೆಚ್ಚುತ್ತದೆ. ಒಂದು ವೇಳೆ ಅದೇ ನಗ್ನತೆ ಬೆತ್ತಲೆ ಶರೀರವಾಗಿ ನಮ್ಮೆದುರು ಪ್ರದರ್ಶನಗೊಂಡರೆ ಅದು ಪೂರ್ತಿ ಅಶ್ಲೀಲವಾಗುತ್ತದೆ.

ಅಶ್ಲೀಲತೆಯನ್ನು ಕಲೆಯ ಮಟ್ಟದಲ್ಲಿ ವಿಚಾರ ಮಾಡುವಾಗ ಪ್ರಾಚೀನ ಕಾಲದಿಂದಲೂ ನಮ್ಮ ಸಂಸ್ಕೃತಿ ಬೆಳೆದು ಬಂದ ರೀತಿಯನ್ನು ಗಮನಿಸಬೇಕಾಗುತ್ತದೆ. ಪ್ರಪಂಚದಾದ್ಯಂತ ಸಾಮಾನ್ಯವಾಗಿ ಎಲ್ಲ ನಾಗರಿಕತೆಗಳಲ್ಲೂ ನಗ್ನ ಮತ್ತು ಲೈಂಗಿಕ ಪ್ರಧಾನ ಶಿಲ್ಪಗಳು, ಚಿತ್ರಗಳು ದೊರೆತಿವೆ. ಇಂದಿನ ಸಾಮಾಜಿಕ ದೃಷ್ಟಿಯಿಂದ ಅವು ಅಸಭ್ಯವೆನಿಸಿದರೂ ಅವನ್ನು ಅಶ್ಲೀಲವೆನ್ನಲಾಗದು. ಈ ಬಗೆಯ ಚಿತ್ರಗಳಿಗೆ ಧಾರ್ಮಿಕ ಭಾವನೆಯನ್ನು ಆರೋಪಿಸಿ ಸಮಾಜ ಹಿಂದಿನಿಂದಲೂ ಒಪ್ಪಿಕೊಂಡು ಬಂದಿದೆ. ವಿಶ್ವದಲ್ಲಿಯೇ ಮೇರುಕೃತಿಗಳಲ್ಲಿ ಒಂದಾಗಿರುವ ವಾತ್ಸ್ಯಾಯನನ ''ಕಾಮಸೂತ್ರ'' ಸೃಷ್ಟಿಸಲ್ಪಟ್ಟಿರುವ ನಮ್ಮ ದೇಶದಲ್ಲಿ ಹಿಂದಿನಿಂದಲೂ ಚತುರ್ವಿಧ ಪುರುಷಾರ್ಥಗಳಿಗೆ ಪ್ರಾಧಾನ್ಯ ನೀಡಲಾಗಿದೆ. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಈ ಪುರುಷಾರ್ಥಗಳಲ್ಲಿ ಧರ್ಮ, ಅರ್ಥ, ಕಾಮಗಳ ಮೂಲಕವೇ ಮೋಕ್ಷ ಸಾಧಿಸಬಹುದೆಂಬ ನಂಬಿಕೆ ಬೆಳೆದು ಬಂದಿದೆ. ಈ ಪುರುಷಾರ್ಥಗಳಲ್ಲಿ ಪ್ರತಿಯೊಂದು ಒಂದೊಂದು ಕಾಲದಲ್ಲಿ ಹೆಚ್ಚು ಪ್ರಾಧಾನ್ಯ ಪಡೆದಿವೆ. ಹೀಗೆ ಕಾಮವೇ ಪ್ರಧಾನವಾಗಿದ್ದ ಕಾಲದಲ್ಲಿ ಕಲೆಯೊಂದಿಗೆ ಲೈಂಗಿಕತೆಯೂ ಬೆರೆತು ಹೋಯಿತೆನ್ನಬಹುದು.

ಹೆಚ್ಚಾಗಿ ಲೈಂಗಿಕ ಚಿತ್ರ, ಶಿಲ್ಪಗಳನ್ನು ನಾವು ದೇವಾಲಯಗಳಲ್ಲಿ ಕಾಣುತ್ತೇವೆ. ಕಲೆಯೊಂದಿಗೆ ಲೈಂಗಿಕತೆಯನ್ನು ಸೇರಿಸುವುದರಲ್ಲಿ ಕಲಾಕಾರನ ಉದ್ದೇಶವೇನಿರಬಹುದು ಎಂದು ಊಹಿಸಿದರೆ, ದೇವಾಲಯಕ್ಕೆ ಬರುವ ಭಾವುಕ ಜನರಲ್ಲಿ ಪೂಜ್ಯ ಭಾವನೆ ಮೂಡಿಸುವುದಕ್ಕಾಗಿ ಧಾರ್ಮಿಕ, ಪೌರಾಣಿಕ ಚಿತ್ರಗಳನ್ನು, ಶಿಲ್ಪಗಳನ್ನು ರಚಿಸಿದ್ದಾರೆ. ಸದಾಕಾಲ ಸುರಾಪಾನ, ಅನ್ಯ ಸ್ತ್ರೀ ಸಹವಾಸದ ರಂಜನೆಗಳಲ್ಲಿ ಆಸಕ್ತರಾಗಿ ದೇವಾಲಯದತ್ತ ಕಣ್ಣೆತ್ತಿಯೂ ನೋಡದವರನ್ನು ಆಕಡೆ ಆಕರ್ಷಿಸಲು ಇಂತಹ ಲೈಂಗಿಕ ಚಿತ್ರಶಿಲ್ಪಗಳನ್ನು ರಚಿಸಿದ್ದಿರಬಹುದೆ? ಕಲಾಕಾರನ ಇಂಗಿತ ಏನೇ ಇರಲಿ, ಆ ಚಿತ್ರಶಿಲ್ಪಿಗಳಲ್ಲಿ ವ್ಯಕ್ತಪಟ್ಟಿರುವ ಕಲಾಕಾರನ ಕಲ್ಪನಾಶಕ್ತಿ, ನಿರ್ಮಾಣ ವಿನ್ಯಾಸ, ರಸತತ್ವ ಪ್ರತಿಪಾದನೆ ಎಲ್ಲವೂ ಅನುಪಮವಾದುದು.

ಶಿಲ್ಪಸೂತ್ರಕ್ಕೆ ಅನುಸಾರವಾಗಿ ತಮ್ಮ ರಚನೆಗಳನ್ನು ರೂಪಿಸುವ ಶಿಲ್ಪಿಗಳು, ಚಿತ್ರಕಾರರು ತಮ್ಮ ಕಲಾಕೃತಿಗಳಲ್ಲಿ ಒಂದಿಲ್ಲೊಂದು ಕಡೆ ಲೈಂಗಿಕ ಸನ್ನಿವೇಶಗಳನ್ನು ಸೇರಸದೆ ಬಿಡುವುದಿಲ್ಲ. ಹಾಗೆಂದಾಗ ಕಲಾವಿದ ಲೈಂಗಿಕ

ಭಾವನೆಯಿಂದ ಕಲಾ ಸೃಷ್ಟಿ ಮಾಡಿದ್ದಾನೆ ಎಂದು ಹೇಳಲಾಗುವುದಿಲ್ಲ. ಕಲಾಪಿದ ಮಾನವನ ದೇಹವನ್ನು ಅತ್ಯುತ್ಕೃಷ್ಟ ಮಾದರಿ ಎಂದು ಭಾಪಿಸಿ ಕಲಾಕೃತಿಯಲ್ಲಿ ನಗ್ನತೆಯನ್ನು ತುಂಬಿರಬಹುದು. ವಾಸ್ತವದ್ದೆನಿಸುವ ದೇಹದ ಅಂಗಾಂಗಳು ಶಿಲ್ಪ ಕಲಾಕೃತಿಯಲ್ಲಿದ್ದರೂ ಅವು ಪರಿಪೂರ್ಣ ವಾಸ್ತವದ ತದ್ರೂಪಗಳಲ್ಲ. ಅಂದರೆ ನಮ್ಮಲ್ಲಿನ ಗೋಮಟೇಶ್ವರನಾಗಲೀ ಹಳೆಬೀಡಿನ ಅರೆನಗ್ನಸುಂದರಿಯರಾಗಲೀ ಅಜಂತಾದ ವ್ಯಕ್ತಿಗಳಾಗಲೀ ಖಜುರಾಹೋ, ಮಥುರಾ, ಮಹಾಬಲಿ ಪುರಂಗಳಲ್ಲಿರುವ ಮಿಥುನ ಶಿಲ್ಪಗಳಾಗಲೀ ನೂರಕ್ಕೆ ನೂರರಷ್ಟು ವಾಸ್ತವದ ಪ್ರತಿರೂಪಗಳಲ್ಲ. ಭಾರತೀಯ ಕಲೆ ಒಪ್ಪಿಕೊಂಡಂತಹ ಒಂದು ಆದರ್ಶ ಪ್ರಮಾಣದಲ್ಲಿ ಅವು ಸೃಷ್ಟಿಸಲ್ಪಟ್ಟಿವೆ. ಅವುಗಳು ನೋಡುಗರಲ್ಲಿ ದುರ್ಭಾವ ಮೂಡಿಸದಂತೆ ದೈವಿಕ ನೆಲೆಯಲ್ಲಿ ರೂಪುಗೊಂಡಿವೆ. ಹೀಗಾಗಿ ವಾಸ್ತವದ ನೆಲೆಯಲ್ಲಿ ಅಶ್ಲೀಲವಾಗಬಹುದಾದ ಆ ಅನುಭವಗಳನ್ನು ದೈವಿಕ ಸ್ತರಕ್ಕೆ ಏರಿಸುವುದರಿಂದ ಅಲ್ಲಿ ಅನೈತಿಕತೆಯು ಎಲ್ಲ ನೆಲೆಗಳನ್ನು ಕಳೆದುಕೊಂಡು ಗೌಣವಾಗಿ, ಆ ಶಿಲ್ಪ ಚಿತ್ರಗಳು ಕಲೆಯ ಮುಖವಾಗುತ್ತವೆ.

ಉದಯವಾಣಿ: 13.8.99

**ಉಪಾಧ್ಯಾ ಮೂಡುಬೆಳ್ಳೆ**

# ತನ್ನನ್ನು ತಾನೇ ಅನ್ವೇಷಿಸಿಕೊಳ್ಳುವ ಪರಿ

ನಮ್ಮ ನಡುವೆ ಅಭಿವ್ಯಕ್ತಿಸುತ್ತಿರುವ ಹಲವರಲ್ಲಿ ರಮೇಶ್‌ಚಂದ್ರರ ಚಿತ್ರಭಾಷೆ ವಿಶಿಷ್ಟವಾದುದು. ಆಧುನಿಕೋತ್ತರ ಹಾಗೂ ವಸಾಹತೋತ್ತರ ದೃಷ್ಟಿಯ ಅಭಿವ್ಯಕ್ತಿಗೆ ಪೂರಕವಾಗಿ ಮಿಶ್ರ ಮಾಧ್ಯಮವನ್ನು ಅವರು ಕೌತುಕಮಯವಾಗಿ ದುಡಿಸಿಕೊಂಡಿದ್ದಾರೆ.

ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ಇತ್ತೀಚೆಗೆ (ಅ. 25-31) ಪ್ರದರ್ಶಿತವಾದ ರಮೇಶ್‌ಚಂದ್ರರ ಅಭಿವ್ಯಕ್ತಿ ಚಿತ್ರ, ವಾಸ್ತುಶಿಲ್ಪಗಳೆಲ್ಲವನ್ನೂ ಕಸಿ ಮಾಡಿಕೊಂಡ ಹಾದಿಯದು. ಇತರರಿಗಿಂತ ವಿಭಿನ್ನವಾಗಿ ನಡೆಯಬೇಕೆಂಬ ಮಹತ್ವಾಕಾಂಕ್ಷೆಯ ಇಂದಿನ ಯುವ ಪೀಳಿಗೆಯ ಕಲೆಯ ಸಹಜ ಲಕ್ಷಣವಾದ ''ಸ್ವಯಂ''ಗೆ ಪ್ರಾಮುಖ್ಯ ನೀಡಿದ ಅಭಿವ್ಯಕ್ತಿಗಳಿವು.

ರೂಪ-ಆಕಾರಗಳ ಸೌಂದರ್ಯಕ್ಕಿಂತ ತನ್ನತನದ ಐಡೆಂಟಿಟಿ ಮೇಕಿಂಗ್ ಪ್ರೋಸೆಸ್‌ಗೆ ಹೆಚ್ಚಿನ ಒತ್ತು ಇಲ್ಲಿದೆ. ನೆಲ-ಗೋಡೆ, ತೆರೆದ ಅವಕಾಶಗಳೆಲ್ಲವನ್ನೂ ಗ್ಯಾಲರಿಯಲ್ಲಿ ದುಡಿಸಿಕೊಂಡಿರುವ ರಮೇಶ್‌ರ ಅಭಿವ್ಯಕ್ತಿಗಳು ಸುಲಭವಾಗಿ ಸಿಗುವ ಮಾಧ್ಯಮಗಳನ್ನು ತಮ್ಮ ಅಭಿವ್ಯಕ್ತಿಯ ಆಸರೆ ಮಾಡಿಕೊಂಡಿರುವುದು ಪರಿಶೀಲನಾರ್ಹ.

ಬದುಕಿನ ಪುಟಗಳಂಥ ಈ ಕೃತಿಗಳಲ್ಲಿ ರಮೇಶ್, ತಮ್ಮನ್ನು ತೆರೆದು ತೋರಿರುವ ರೀತಿಯಲ್ಲಿ ಅನನ್ಯತೆಯಿದೆ. ರಮೇಶ್‌ರ Postmortual Memoriesನಲ್ಲಿ ತಮ್ಮ ಬದುಕಿನ ಹಲವು ಘಟ್ಟಗಳನ್ನಲ್ಲದೆ ಅಂತಿಮ ಅಧ್ಯಾಯವನ್ನೂ ಗ್ರಹಿಸಿರುವ ಈ ವಿಶಿಷ್ಟ ಕಲಾವಿದ ಝೆರಾಕ್ಸ್, ಛಾಯಾಚಿತ್ರ, ಚಿತ್ರ, ಬರಹ ಇತ್ಯಾದಿಗಳನ್ನು ತಮ್ಮದೇ ರೀತಿಯಲ್ಲಿ ತಂದುಕೊಂಡಿದ್ದಾರೆ. ಪುಸ್ತಕದ ರೂಪದ ಅಭಿವ್ಯಕ್ತಿಯಲ್ಲಿ ವೈಶಿಷ್ಟ್ಯವಿದ್ದರೂ, ಅನುಭವದ ಅಭಿವ್ಯಕ್ತಿಯಲ್ಲಿ ರಮೇಶ್‌ಚಂದ್ರ ಮಿಂಚುತ್ತಾರಾದರೂ ಹಲವು ವರ್ಷಗಳ ಹಿಂದೆ ಜಪಾನಿನ ಶಿಲ್ಪಿಯೊಬ್ಬನ ಈ ದೃಷ್ಟಿಯ ಅಭಿವ್ಯಕ್ತಿ, ನಳಿನಿ ಮಲಾನಿಯವರ ಚಿತ್ರಿತ ಝೆರಾಕ್ಸ್ ಮಾಡಿದ ಪುಸ್ತಕ ಪ್ರತಿಗಳು, ಇತ್ತೀಚೆಗೆ ರತ್ನಾರಾಮನಾಥನ್ ಸೃಷ್ಟಿಸಿದ್ದ ಇ - ಮೇಲ್ ಸುದ್ಧಿಯಾಧಾರಿತ ಹಲವು ರೀತಿಯ ಪುಸ್ತಕಗಳ ಅಭಿವ್ಯಕ್ತಿಗಳು ಇಲ್ಲಿ ನೆನಪಾಗದಿರವು.

ಹಾಗೆಯೇ 'ಚೆಸ್'ನ ಕಲ್ಪನೆಯನ್ನು, ಆಶ್ರಮವನ್ನು ಒಳಗೊಂಡ ಗುಡಿಸಲಿನಂಥ ಕಲ್ಪನೆಯ ರೂಪ ಈಗ ಜಪಾನಿನಲ್ಲಿರುವ ಅರ್ಚನಾ ಹೆಬ್ಬಾರ್‌ರ ಗುಡಿಸಲಿನಂಥ ಕಲ್ಪನೆಯ ಅಭಿವ್ಯಕ್ತಿಯೊಂದನ್ನು ನೆನಪಿಸುತ್ತವೆ. ಆದರೂ ಇಲ್ಲಿ ರಮೇಶ್ ನಿರ್ವಹಣೆಯಲ್ಲಿ ತಮ್ಮತನದ ಛಾಪನ್ನು ಲೇಪಿಸಲು ಪ್ರಯತ್ನಿಸಿರುವಲ್ಲಿ ಹೊಸತನವಿದೆ.

ಬಾಣಲೆಯಂಥ ನಿಮ್ಮ ಅವಕಾಶದ ಪಾತ್ರೆಯ ರೂಪದಲ್ಲಿ ಹಲವು ಅವಕಾಶಗಳನ್ನು ನಿರ್ಮಿಸಿ, ಪಾರದರ್ಶಕ ಗಾಜನ್ನು ಮುಚ್ಚಿ, ಅದರ ಮೇಲ್ಮೈನ ರೇಖಾ ಚಿತ್ರಗಳ ಮೂಲಕವೂ ವಿಭಿನ್ನ ಆಯಾಮಗಳನ್ನು ತಂದುಕೊಂಡ ಅಭಿವ್ಯಕ್ತಿಗಳು ಅನನ್ಯವೇ.

'ಮೆಮೋರಿಯಲ್'ನ ರೂಪ - ಕಲ್ಪನೆ ಬಸ್ತಾರಿನ ಮುರಿಯಾ ಜನಾಂಗದ ಗೋರಿಗಳ ಮೇಲೆ ನಿಲ್ಲಿಸಿದ ಚಿತ್ರಿತ ಫಲಕಗಳನ್ನು ನೆನಪಿಗೆ ತಂದರೂ ಸಮಕಾಲೀನ ಕಲೆಯಲ್ಲಿ ಈ ಕಲ್ಪನಾ ಲಹರಿ ಅಪೂರ್ವ. ಕಲೆಯು ಸಾಂಸ್ಕೃತಿಕ ಇತಿಹಾಸದ ನೆನಪನ್ನು ಕಾಡಿಸುತ್ತಲೇ, ಗೊಮ್ಮಟನ ಸಾಕ್ಷಾತ್ಕಾರ ಮಾಡಿಸುತ್ತಲೇ ನಮ್ಮೊಳಗಿನ ಕ್ರೌರ್ಯ-ಹಿಂಸೆಗಳ ಮುಖವನ್ನೂ ನೋಡಿಕೊಳ್ಳುವ ಅವಕಾಶ ರಮೇಶ್ ಚಂದ್ರರ ಅನುಭವದ ಫಲವಾಗಿ ನಮಗೂ ದಕ್ಕುವಂತಿದೆ.

ರಮೇಶ್ ತಮ್ಮ ಭಾವಚಿತ್ರಗಳನ್ನೂ, ಪೂರ್ಣ ಚಿತ್ರಗಳನ್ನೂ ವಿಕೃತಗೊಳಿಸಿ, ಝೆರಾಕ್ಸ್ ಹಾಗೂ ಛಾಯಾ ಚಿತ್ರ ಮಾಧ್ಯಮಗಳಲ್ಲಿ ವೈಭವೀಕರಿಸಿ, ಬಣ್ಣಗಳನ್ನು ತೀಡಿ ಅಸ್ಪಷ್ಟವಾಗಿಸಿ ಅಪರಿಚಿತರಿಗೂ ತಾವು ದಕ್ಕುವಂತೆ ಮೂಡಿಬಂದಿದ್ದಾರೆ. ಅಪರೂಪಕ್ಕೆ ಬಳಸಿರುವ ಬಣ್ಣಗಳೂ ಗಂಭೀರ ನೆಲೆಯವು. ಒಟ್ಟಾರೆ ಇದೊಂದು ಅಪರೂಪದ ಅಭಿವ್ಯಕ್ತಿಯ ಪ್ರದರ್ಶನ; ಬಹುಕಾಲ ಕಾಡುವ ಸಂವೇದನಾಶೀಲತೆಗೆ ನಿದರ್ಶನ. ರಮೇಶ್ ತಮ್ಮನ್ನು ಹುಡುಕಿ, ನೋಡಿಕೊಂಡಿರುವ ರೀತಿ ಅಪರೂಪವೆಂಬುದರಲ್ಲಿ ಅನುಮಾನವಿಲ್ಲ.

ಕನ್ನಡ ಪ್ರಭ : 7.11.99 — ಕೆ.ವಿ. ಸುಬ್ರಹ್ಮಣ್ಯಂ

# ಗುಜರಿಯ ನಡುವೆ ಮಹಾ ಬಜಾರು !

ಸುತ್ತಲಿನ ಎಲ್ಲವನ್ನೂ, ಅವುಗಳ ನಡುವೆ ತನ್ನನ್ನೂ ಗುರುತಿಸಿಕೊಳ್ಳುತ್ತ, ವೈಭವೀಕರಿಸುತ್ತ ಹೋಗುವ ಇಂದಿನ ಯುವ ಪೀಳಿಗೆಯ ಕಲಾವಿದರ ಮುಂದೆ ಅವರಿಗೆ ಮಾದರಿಗಳಂತಿರುವ ಕೆಲವೇ ಕಲಾವಿದರಲ್ಲಿ ವೀವಾನ್ ಸುಂದರಂ ಒಬ್ಬರು. ಸ್ಥಳೀಯ ಸಂಸ್ಕೃತಿಯನ್ನು ಉಸಿರಾಡುತ ಪಶ್ಚಿಮವನ್ನು ಅರಗಿಸಿಕೊಂಡು ಅಭಿವ್ಯಕ್ತಿಸುವ ವಿವಾನ್ ಸುಂದರಂ, ಇಂದಿನ ಭೌಗೋಳೀಕರಣಗೊಂಡ ಕಲೆಗೆ ಉತ್ತಮ ಉದಾಹರಣೆಯಾಗಿಯೂ ನಮ್ಮ ಮುಂದಿದ್ದಾರೆ. ಈ ಕಾರಣದಿಂದಲೇ ಇವರ ಕಲೆ, ಅದು ಯಾವುದೇ ಮಾಧ್ಯಮದ್ದಾಗಲಿ 'ಯೂನಿವರ್ಸಲ್' ಆದ ಅಂಶವನ್ನು ಒಳಗೊಂಡಿರುವುದನ್ನು ನಾವು ಕಾಣಬಹುದು. ವೈಯಕ್ತಿಕ ಅನುಭಗಳನ್ನು ಸಾರ್ವತ್ರೀಕರಿಸುವ, ಸುತ್ತಲಿನ ವಸ್ತುಗಳಿಂದಲೇ ಅಭಿವ್ಯಕ್ತಿಸುವ ವೀವಾನ್ ಸುಂದರಂ, ಕಮಾಡಿಟಿಯಾಗಿರುವ ಕಲೆಯನ್ನು, ಮಾರುಕಟ್ಟೆಗಳ ಕಸದಂಥ ಗುಜರಿಯ ವಸ್ತುಗಳನ್ನು ಮೇಲಿನಿಂದ ನಿಂತು ನೋಡಿದಂತೆ ಛಾಯಾ ಚಿತ್ರ ತೆಗೆದು ಲೋಹದ ಚೌಕಟ್ಟು ಹೊಂದಿಸಿ ಪ್ರತಿಷ್ಠಾಪಿಸಿದ ಅಭಿವ್ಯಕ್ತಿಗಳು ಸಾಕ್ಷಿ ಗ್ಯಾಲರಿಯಲ್ಲಿ ಪ್ರದರ್ಶಿತವಾದವು. 1997ರಲ್ಲಿ ಜೋಹನ್ಸ್‌ಬರ್ಗ್‌ನ ಎರಡನೆಯ ಬೈನಾಲೆಯಲ್ಲಿ ಪ್ರದರ್ಶಿನಗೊಂಡ ಈ ಪ್ರತಿಷ್ಠಾಪನಾ ಅಭಿವ್ಯಕ್ತಿ ಮುಂಬಯಿ, ಅಮ್‌ಸ್ಟರ್‌ಡಮ್, ನವದೆಹಲಿಗಳ ನಂತರ ಬೆಂಗಳೂರಿಗೆ ಬಂದಿತ್ತು.

ಈ ಹಿಂದೆ ಛಾಯಾ ಚಿತ್ರಗಳನ್ನು ಆಕರವಾಗಿ ಹಾಗೂ ಪ್ರಸ್ತುತ ಅಭಿವ್ಯಕ್ತಿಯ ಮಾಧ್ಯಮವಾಗಿ, ಹೀಗೆ ಎರಡೂ ಸಾಧ್ಯತೆಗಳಲ್ಲಿ ದುಡಿಸಿಕೊಂಡಿರುವ ವೀವಾನ್ ಭಾರತೀಯ ಮಾರುಕಟ್ಟೆಯ ಮಹಾನ್ ದೃಶ್ಯವೈಭವವನ್ನು, ಅದನ್ನು ಮೂಲತಃ ಸೃಷ್ಟಿಸಿದ ವ್ಯಕ್ತಿಗಳನ್ನು ನಗಣ್ಯವಾಗಿಸಿ ತಮಗೆ ಅಗತ್ಯವಿರುವಂತೆ ಗುಜರಿಯ (ನವದೆಹಲಿಯ ಕೆಂಪುಕೋಟೆಯ ಭಾನುವಾರದ ಮಾರುಕಟ್ಟೆ) ಸಾಮಾನುಗಳನ್ನು ಕ್ಲಿಕ್ಕಿಸಿ ದಕ್ಕಿಸಿಕೊಂಡು ಪೋಸ್ಟ್‌ಮಾಡರ್ನ್ ತತ್ವಕ್ಕೆ ಹತ್ತಿರವಾಗಿ ತಮ್ಮದಾಗಿಸಿಕೊಂಡಿದ್ದಾರೆ. ಇದು ಯಾವುದೇ ದೇಶದ ಗುಜರಿಯ ನೋಟದ ತುಣುಕುಗಳ ಬಿಂಬಗಳಂತೆ ಮೇಲ್ನೋಟಕ್ಕೆ ಕಂಡರೂ, ಆತ ಹೊಕ್ಕಂಥ ಭಾರತೀಯ ಹೊಳಹುಗಳು ಎದ್ದು ಕಾಣುತ್ತದೆ.

ಪ್ರತಿ ಚಿತ್ರವನ್ನೂ ಹಲವಾರು ಪ್ರಿಂಟ್‌ಮಾಡಿ ಕೆಂಪು ಬಣ್ಣದ, ಲೋಹದ ಚೌಕಟ್ಟಿನ ವೃತ್ತಾಕಾರದಲ್ಲಿ ನೆಲದ ಅವಕಾಶದಲ್ಲಿ ರಾಶಿ ಹಾಕಿದ ಪ್ರತಿಷ್ಠಾಪನೆಯ ಬದಿ ನಿಂತು, ಮೇಲಿನಿಂದ ಕೆಳಗೆ ನೋಡಿದರೆ cash and carry ಸೂಚನಾ ಫಲಕ ನಾವು ಮತ್ತೊಂದು ಆಧುನಿಕ ಮಾರುಕಟ್ಟೆಯ ಅಂಗಡಿಯೊಂದರಲ್ಲಿರುವ ಅನುಭವ ಮೂಡಿಸುತ್ತದೆ. ಚಪ್ಪಲಿ, ಬೂಟು, ಬ್ರಷ್, ಪೆನ್ನು, ಬೆಂಡು, ಕ್ರಿಕೆಟ್ ಚೆಂಡು, ಟ್ರಾನ್ಸಿಸ್ಟರ್, ಪುಸ್ತಕ, ಕ್ಯಾಸೆಟ್,

ಗೊಂಬೆಗಳು ಹೀಗೆ ಎಲ್ಲವೂ ಇರುವ ದೇಶೀ - ವಿದೇಶೀ ವಸ್ತುಗಳು ಈ ಛಾಯಾಚಿತ್ರಗಳಲ್ಲಿ ಕಾಣಿಸಿಕೊಂಡಿವೆ, ಕೆಲವು ಚಿತ್ರಗಳು ವಿಶಿಷ್ಟವಾಗಿ, ಕೆಲವು ಸಾಮಾನ್ಯವಾಗಿ ಸಂಯೋಜಿಸಿ ಕ್ಲಿಕ್ಕಿಸಲ್ಪಟ್ಟಿವೆ.

ಭಾರತೀಯ ಬಜಾರಿನ ಮಾಯಾಲೋಕದ ಬೃಹತ್ ಛಾಯಾಚಿತ್ರವೊಂದನ್ನು ಗೋಡೆಯ ಅವಕಾಶದಲ್ಲಿ ಪ್ರದರ್ಶಿಸಿದ್ದಾರೆ. ನಮ್ಮ ಆರ್ಥಿಕ ಪದ್ಧತಿಯ ದ್ವಂದ್ವಮಯ ಮುಖವನ್ನು ಪರಿಚಯಿಸುವಂಥ, ನಮ್ಮ ಗುಜರಿ ಸಂಸ್ಕೃತಿಗೆ ಕಾರಣವಾದ ಸೂಕ್ಷ್ಮ ಅಂಶಗಳನ್ನು ಬಿಂಬಿಸುವ ಸ್ಕ್ರೀನ್‌ಪ್ರಿಂಟ್ ಮಾಡಿಸಿ ನೇತುಹಾಕಿದೆ. ಛಾಯಾಚಿತ್ರಗಳ ಸಂಪುಟಗಳನ್ನೂ ನೋಡುವಂತೆ ಇಡಲಾಗಿದೆ.

ಇವುಗಳ ನಡುವೆ ನಡೆದಾಡುವಾಗ ನಾವು ಗುಜರಿಯ ನಡುವೆಯೇ ಇರುವ ಅನುಭವವಾಗುತ್ತದೆ. ಈ ಅನುಭವವನ್ನು ಗ್ಯಾಲರಿಯೊಳಕ್ಕೆ ತರುವಲ್ಲಿ, ಅದನ್ನು ತಮ್ಮದೇ ಆದ ರೀತಿಯಲ್ಲಿ ಕಲೆಯಾಗಿಸುವಲ್ಲಿ, ಸೌಂದರ್ಯಾತ್ಮಕ ಅಂಶವನ್ನೂ ಉಳಿಸಿಕೊಂಡು ಪ್ರತಿಷ್ಠಾಪನಾ ಅಭಿವ್ಯಕ್ತಿಗಳಾಗಿಸಿರವ ವಿವಾನ್ 13- 12- 1999ರಂದು ಮಿಥಿಕ್ ಸೊಸೈಟಿಯಲ್ಲಿ ತಮ್ಮ ವರ್ಣಪಾರದರ್ಶಿಗಳ ಪ್ರದರ್ಶನ ಹಾಗೂ ವಿವರಣೆ ನೀಡಿದ ಸಂದರ್ಭದಲ್ಲಿ ಪಶ್ಚಿಮದ ಮಿನಿಮಲಿಸ್ಟ್‌ರ ನೆನಪು ಕಾಡಿದ ಪರಿಯನ್ನು ಉಲ್ಲೇಖಿಸಿದರು.

ಕನ್ನಡ ಪ್ರಭ : 26. 12. 99 **ಕೆ.ವಿ. ಸುಬ್ರಹ್ಮಣ್ಯಂ**

ವಿವಾನ್ ಸುಂದರಂರವರ
ಒಂದು ಪ್ರತಿಷ್ಠಾಪನಾ ಅಭಿವ್ಯಕ್ತಿ

# ಸ್ತ್ರೀ ಸ್ಫೂರ್ತಿಯ ನೆಲೆಗಳ ಹುಡುಕಾಟ

ಒಂದು ಕ್ಷಣ ನಿಮ್ಮ ಕಾಲನ್ನು ನದಿಯಲ್ಲಿಸಿದರೆ ಆ ಕ್ಷಣದಿಂದಲೇ ನದಿ ಬದಲಾಗುತ್ತದೆ ಎನ್ನುತ್ತದೆ ಗ್ರೀಕ್ ಗಾದೆ. ಬುದ್ಧ ಅದನ್ನೇ ಮುಂದುವರೆಸಿ ನದಿಯ ಜೊತೆ ನಮ್ಮ ಕಾಲೂ ಬದಲಾಗುತ್ತದೆ ಎನ್ನುತ್ತಾನೆ. ಕ್ಷಣಕ್ಷಣದಲ್ಲೂ, ಕ್ಷಣದ ಕ್ಷಣದಲ್ಲೂ ಬದಲಾವಣೆಯಾಗುವ, ಎಲ್ಲ ಪ್ರಕ್ರಿಯೆಯನ್ನು ಸೂಕ್ಷ್ಮವಾಗಿ ಹಿಡಿದಿಡಬಲ್ಲ ಮನಸ್ಸು ಎಷ್ಟೇ ಪ್ರತಿಭಾ ಸಂಪನ್ನವಾದರೂ, ಶಕ್ತಿಶಾಲಿಯಾದರೂ ಅದರ ಯಥಾವತ್ ಚಿತ್ರಣ ಕೊಡಲಾಗುವುದಿಲ್ಲ. ಚಲಿಸುವ ಮೋಡದ ಚಿತ್ರವನ್ನು ಬಿಡಿಸಲು ಕುಳಿತರೆ ಒಂದು ಕ್ಷಣದ ಅದರ ಆಕಾರವನ್ನು ಬಿಡಿಸಬಹುದು. ಪ್ರತಿಕ್ಷಣ ಬದಲಾಗುವ ಆ ಚಿತ್ರವನ್ನು ಕಲಾಕೃತಿಯೊಂದರಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸುವುದು ಹೇಗೆ? ಇದೇ ಪ್ರಶ್ನೆಯನ್ನು ವಿಮರ್ಶೆಯನ್ನೂ ಕುರಿತಂತೆ ಸ್ವಲ್ಪ ಭಿನ್ನ ರೀತಿಯಲ್ಲಿ ಯೋಚಿಸಬಹುದು. ನಮ್ಮ ಚಿತ್ರಕಲೆಯೂ ಸೇರಿದಂತೆ ಸಾಹಿತ್ಯ, ಸಂಗೀತ ಮುಂತಾದ ಕಲಾ ಪ್ರಕಾರಗಳು ನಮ್ಮ ಮೂಲ ಬೇರುಗಳ ಜೊತೆ ಜೊತೆಗೆ ಆಧುನಿಕ ತಂತುಗಳನ್ನು ಜೀರ್ಣಿಸಿಕೊಂಡಿದೆ.

ಈ ಹೊತ್ತು ಸಾಹಿತ್ಯವನ್ನು ಹೇಗೆ ಆನಂದವರ್ಧನನ ಧ್ವನಿಸಿದ್ಧಾಂತದಿಂದ ಅಳೆಯಲಾಗುವುದಿಲ್ಲವೋ ಹಾಗೆಯೇ ಕೇವಲ ರಸಸಿದ್ಧಾಂತವನ್ನು ಕೇಂದ್ರವಾಗಿರಿಸಿಕೊಂಡು ಕಲಾಕೃತಿಗಳನ್ನು ಪರಿಭಾವಿಸಲಾಗದು. ಒಂದು ವೇಳೆ ಹಾಗೆ ನೋಡಿದರೆ ಅದೊಂದು ದೊಡ್ಡ ಮಿತಿಯಾಗುತ್ತದೆ.

ನೀಲಿಮಾ ಶೇಕ್ ತಮ್ಮ ಪ್ರವಾಸ ಕಾಲದಲ್ಲಿ ಕಂಡ, ಮನಸ್ಸಿನಲ್ಲಿ ದಾಖಲಾದ ಚಿತ್ರಗಳನ್ನು ಕಲಾಕೃತಿಯಾಗಿ ಮಾರ್ಪಡಿಸಿದ್ದಾರೆ. ಈ ಚಿತ್ರಗಳು ನಮ್ಮ ಎಲ್ಲ ಮಾನದಂಡಗಳನ್ನು ಮೀರಿರುವಂತಹದ್ದು. ಅಂದಮಾತ್ರಕ್ಕೆ ಅವು ಮಹತ್ವದ ಕೃತಿಗಳೇನಲ್ಲ. ಈವರೆಗಿನ ಆಲೋಚನಾ ಕ್ರಮವೊಂದನ್ನು ಬಿಟ್ಟು ಹೊಸದೊಂದು ಆಲೋಚನಾ ಕ್ರಮವನ್ನು ಅವರ ಕಲಾಕೃತಿ ಹೇಳುತ್ತದೆ.

ನೀಲಿಮಾ ಸ್ತ್ರೀಯ ಸ್ವಯಂಸ್ಫೂರ್ತಿಯ ನೆಲೆಗಳನ್ನು ಹುಡುಕುವ ಪ್ರಯತ್ನ ಮಾಡುತ್ತಾರೆ. ಇಲ್ಲಿಯವರೆವಿಗೂ ಮಿತವಾದ ಚೌಕಟ್ಟಿನಲ್ಲಿ ಬಂಧಿತವಾದ ಕಲೆಯ ದೃಷ್ಟಿಕೋನವನ್ನು ವಿಸ್ತೃತಗೊಳಿಸುವುದಕ್ಕೆ, ಈ ಬಗೆಯ ಚಿಂತನೆಗಳು ಸಹಾಯಕವಾಗುತ್ತಿವೆ. ಜೊತೆಗೆ ಚಿತ್ರಕಲೆಯಲ್ಲಿ ಈವರೆವಿಗೂ ಇದ್ದ ಸೌಂದರ್ಯ ಪ್ರಜ್ಞೆಯು ಈ ಮೂಲಕ ಹೊಸದೊಂದು ಅರ್ಥವನ್ನು ಪಡೆದುಕೊಳ್ಳುತ್ತಿದೆ.

ಹೆಣ್ಣು ಮತ್ತು ಪ್ರಕೃತಿ ಜೀವರಾಶಿಯ ಮರು ಉತ್ಪಾದಕ ಶಕ್ತಿಗಳು. ಸ್ತ್ರೀತನದ ಚೈತನ್ಯವನ್ನು ಪ್ರಕೃತಿಯ ಶಕ್ತಿಯ ಜೊತೆ ಸಮೀಕರಣ ಮಾಡಲಾಗಿದೆ. ಇದರೊಂದಿಗೆ ಸ್ತ್ರೀತ್ವದ ಬೇರೆ ಬೇರೆ ಮುಖಗಳನ್ನು ಮರೆಮಾಚಲಾಗಿದೆ. ಜೀವ ಮರು ಉತ್ಪಾದಕ ಶಕ್ತಿಯ ಕಾರಣಕ್ಕಾಗಿಯೇ ಹೆಣ್ಣನ್ನು ಒಂದು ಆದರ್ಶ ಸ್ಥಿತಿಯಲ್ಲಿ ಇಟ್ಟು ನೋಡುವ ಪ್ರಯತ್ನವನ್ನು ಮಾಡಲಾಗಿದೆ. ಗಂಡು ಹೆಣ್ಣನ್ನು ನೋಡುವ ಪರಿಕ್ರಮದಲ್ಲಿ ಆಕೆಯ ಅತೀತ ಶಕ್ತಿಯನ್ನು ಸಾಂಕೇತೀಕರಣಕ್ಕೆ ಒಳಪಡಿಸಲಾಗಿದೆ. ಆದರೆ ವಸ್ತುಶಃ ಸ್ತ್ರೀ ಇದೆಲ್ಲವನ್ನು ಒಳಗೊಂಡು ವಾಸ್ತವದ ಒಬ್ಬ ಜೀವಿ ಎಂದು ಮರೆಯುವಂತಿಲ್ಲ.

ನೀಲಿಮಾರ ಚಿತ್ರಗಳು ತೀರಾ ಸರಳ. ಅಲ್ಲಿ ಯಾವುದೇ ಸಂಕೀರ್ಣ ಜಗತ್ತು ಇಲ್ಲ. ಹೆಣ್ಣು ಮತ್ತು ಅವಳೊಂದಿಗೆ ಸ್ಥಾಪಿತವಾಗಿರುವ ಸಂಬಂಧಗಳನ್ನು ಹುಡುಕಲು ಅವರು ಯತ್ನಿಸುತ್ತಾರೆ.

ಇಂತಹ ಪ್ರಯತ್ನಗಳಲ್ಲಿ ತಾಯಿ ಮತ್ತು ಆಕೆಯ ಗರ್ಭದ ಬಗ್ಗೆ ಹೆಚ್ಚು ಆಸಕ್ತಿ ತೆಗೆದುಕೊಂಡಂತೆ ಕಾಣುತ್ತದೆ. ಸ್ತ್ರೀಯ ಪೂರ್ಣತ್ವ ಮತ್ತು ಸ್ಫೂರ್ತಿಯ ನೆಲೆಗಳಲ್ಲಿ ಆಕೆಯ ಗರ್ಭವೂ ಒಂದು. ಗರ್ಭಸ್ಥ ಶಿಶುವಿನ ನಿರೀಕ್ಷೆಯಲ್ಲಿ ಆಕೆಯ ನಲಿವು, ಸಂಕಟ, ಉದ್ರೇಕ, ನಿರೀಕ್ಷೆ, ಸಂತೋಷದ ಸಮ್ಮಿಶ್ರ ಭಾವ ಪ್ರಕಟವಾಗಿದೆ.

ಸ್ತ್ರೀ ಮತ್ತು ಸಹಜ ಪ್ರಸವವನ್ನು ಇಲ್ಲಿನ ಚಿತ್ರಗಳು ಎತ್ತಿ ಹಿಡಿಯುತ್ತದೆ. ಬಹುಶಃ ಈ ಸಹಜ ಪ್ರಸವಗಳೇ ತಾಯಿ ಮತ್ತು ಮಗುವಿನ ಮಧ್ಯೆ ನಿಜವಾದ ಸಂಬಂಧದ ತಂತುವೊಂದನ್ನು ನೇಯುವುದು.

ಮರ ಗಿಡಗಳ ಜೊತೆ, ಬೆಟ್ಟ ಗುಡ್ಡಗಳ ಜೊತೆ ಏರ್ಪಡುವ ಪ್ರಾಕೃತಿಕ ಸಂಬಂಧಗಳು ಇಲ್ಲಿನ ಜಿಜ್ಞಾಸೆಯ ವಿಷಯಗಳಾಗಿವೆ. ಪುರುಷ ಪ್ರಕೃತಿಯ ಮೇಲೆ ಹತೋಟಿ ಸಾಧಿಸಲು ಯತ್ನಿಸಿದಂತೆ ಸ್ತ್ರೀಯ ಮೇಲೂ ಪ್ರಯತ್ನಿಸಿದ. ಪುರುಷನನ್ನು ನೇರವಾಗಿ ಪ್ರತಿಭಟಿಸಿದ ಸ್ತ್ರೀ ಸಮೂಹ ಮೌನವನ್ನೂ ಪ್ರತಿಭಟನೆಯ ಅಸ್ತ್ರವಾಗಿಸಿಕೊಂಡಿತು.

ಇಂತಹ ಸಂಬಂಧಗಳ ಸೂಕ್ಷ್ಮತೆಯನ್ನು ಹೇಳುವಲ್ಲಿ ನೀಲಿಮಾ ತೀರಾ ವಾಚ್ಯವಾದ ಮಾರ್ಗವೊಂದನ್ನು ಹಿಡಿಯುತ್ತಾರೆ. ಕುತೂಹಲದ ಸಂಗತಿ ಎಂದರೆ ಬಣ್ಣಗಳನ್ನು ಬಳಸಿಕೊಳ್ಳುವಲ್ಲಿ ವಾಸ್ತವಿಕ ಅಂಶಗಳನ್ನು ಹಾಗೇ ಇಡುವಲ್ಲಿ ಅವರು ಅಷ್ಟು ಉತ್ಸಾಹವನ್ನು ಎಲ್ಲಿಯೂ ತೋರಿಸುವುದಿಲ್ಲ. ಹೊಸತನದ ಅನ್ವೇಷಣೆಯಲ್ಲಿ ತೊಡಗುವ ಅವರು ಮಿಕ್ಕೆಲ್ಲವನ್ನೂ ಹಿಂದೆಯೇ ಬಿಟ್ಟು ಬಿಡುತ್ತಾರೆ. ಬಹುಶಃ ಎರಡು ಅಂಶಗಳಿಗೆ ಅವರು ನೇರವಾಗಿ ಪ್ರತಿಕ್ರಿಯಿಸುತ್ತಿದ್ದಾರೆ ಅನ್ನಿಸುತ್ತದೆ. ಒಂದು ಸಂಕೀರ್ಣವಾದ ನವ್ಯ ಕಲೆಗೆ, ಎರಡು ಪುರುಷ ತೋರಿಸಿಕೊಟ್ಟಿರುವ ಅಭಿವ್ಯಕ್ತಿಯ ಕ್ರಮಕ್ಕೆ, ಅವರು ಅಭಿವ್ಯಕ್ತಿಯ ನಿಗೂಢ ಕ್ರಮವನ್ನು ಎಲ್ಲಿಯೂ ಎತ್ತಿ ಹಿಡಿಯುವುದಿಲ್ಲ. ಒರಟಾದ ಅಭಿವ್ಯಕ್ತಿ ಕ್ರಮವನ್ನು ಅನುಸರಿಸುತ್ತಾರೆ.

ಕಲೆ ಮತ್ತು ಕಲಾವಿದನ ಅಂತರ್ ಸಂಬಂಧಗಳು ಇಂದು ನಮಗೆ ಹೆಚ್ಚು ಕುತೂಹಲಪೂರ್ಣವಾದ ಅನೇಕ ಅಂಶಗಳನ್ನು ಬಿಟ್ಟುಕೊಡುತ್ತಿವೆ. ಕಲೆಯ ನಿಜವಾದ ಸಂಯೋಜನೆ ಆರಂಭವಾಗುವುದು ಮನಸ್ಸಿನಲ್ಲಿ.

ಮನಸ್ಸಿನಲ್ಲಿ ಸಂಯೋಜನೆಗೊಂಡು ಒಂದು ಹೊಸ ರೂಪ ಧರಿಸಿ ಪ್ರಕಟಗೊಳ್ಳುವ ಕಲೆಯನ್ನು ಪುರುಷ `Individuality' ಎಂದು ಕರೆದರೆ ಸ್ತ್ರೀ ಸಮೂಹ ಎಂದು ಕರೆಯುತ್ತಾಳೆ. ಕಲೆ ಸಾಕಾರವಾಗುವ ಹೊತ್ತಿನ ಈ ಭಿನ್ನಭಾವಗಳು ಕಲೆಯ ನಿಜವಾದ ನೆಲೆಗಟ್ಟನ್ನು ಸೂಚಿಸುವಂತಹದ್ದು. ಈ ಕಾರಣಕ್ಕಾಗಿ ಪುರುಷ ಹೆಚ್ಚು ಸಂಕೀರ್ಣ, ಸುಂದರಗೊಳಿಸಲು ಪ್ರಯತ್ನಿಸಿದರೆ, ಸ್ತ್ರೀ ಹೆಚ್ಚು ಸರಳ ಮತ್ತು ಅರ್ಥಪೂರ್ಣಗೊಳಿಸಲು ಪ್ರಯತ್ನಿಸುತ್ತಾಳೆ.

ನೀಲಿಮಾ ತಮ್ಮ ಕಲಾಕೃತಿಗಳಲ್ಲಿ ಬಣ್ಣಗಳ ಬೆಡಗನ್ನಾಗಲಿ, ಕಲೆಯ ಮೆರುಗನ್ನಾಗಲಿ ಅದರ ಸಂಯೋಜನೆ, ಒಳ ನೇಯ್ಗೆ ಹೀಗೆ ಯಾವುದರಿಂದಲೂ ಈ ಕಲಾಕೃತಿಗಳನ್ನು ತೀವ್ರಗೊಳಿಸಲು ಯತ್ನಿಸುವುದಿಲ್ಲ. ಆದರೆ ಸೂಕ್ಷ್ಮವಾಗಿಯೇ ಅವರು ನಿರೂಪಿಸಿರುವ ಸ್ತ್ರೀತ್ವದ ಮಾದರಿಗಳು ಮತ್ತು ಸಂಬಂಧಗಳು ಕುತೂಹಲ ಮೂಡಿಸುತ್ತವೆ. ಅಷ್ಟೇನು ಮಹತ್ವವಲ್ಲದ ಈ ಕಲಾಕೃತಿಗಳು ನಮ್ಮನ್ನು ನಿರ್ದಿಷ್ಟ ಕಾರಣಕ್ಕಾಗಿ ಸೆಳೆಯುತ್ತಿವೆ.

ಉದಯವಾಣಿ **ಪಿ. ಚಂದ್ರಿಕಾ**

# MIXING SACRED WITH PROFANE

M.S. Prakash Babu's series of paintings (at Images Art Gallery) is a mega-project for him. He inserts too many micro and macro objects - ranging between an ordinary brinjal to the likes of a legendary royal pillar and equestrian statue, to focus on the combination of the sacred and the profane.



M.S. Prakash Babu's Painting
Oil on Canvas - 1998

All these are contained in the self-consciously defined, flexibly lustrous `red' colour which metamorphoses into non-relatable identities. For instance, a golden sword is pierced as well as contained within the suggestive breasts (in red) which in turn is a part of the torso (in red). The torso and the overall red of this particular work act as two kinds of base, in order to contain something else, say, the sword and the torso/ breast, and the authority and sensuality they represent. This is the

character of his works in general. The inevitability of the mutual relation between the sacred and the profane is much underlined. Prakash's involvement in art evolves from a specific interlude position within the Kannada culture, as is evident in the proverbial "uttama prabhutva lolalotte" (the 'best power holds nothing'). In the best of his works, he holds a dialogue with the 'power' - social, political or otherwise - but his stance is pictorially served ambiguous.

By assembling the odd objects within the undefined neo-Marxist layers of red, Prakash produces a new picture of power, evident within a democratic circumstance. He himself is a product of such a metamorphosis. The Chitradurga fort (Durga), as it is now, along with red as something more than being mere colour, serves the main skeletal structure of his works. The works contain the view of a fallen cardboard-like man holding a sword and seen from above the enclosed fort walls; the haunted piece of land with Gandhi's spectacles, book etc; Madakarinayaka (one of Durga's popularly represented king) and others which confirm that Prakash is locating these non-realistically depicted but identifiable personalities in a dramatic situation for which Durga serves as the plot.

Many novels and films - including Puttanna Kanagal's "Naagarahaavu" have used Durga as a naturalistic, supportive plot. Prakash does not use it as a mere historic and realistic monument. Since his childhood days were spent in that very place, Durga has been a living-place within him. This has been a truth - that Durga's grandeur was personally ripped off, to be converted into an imaginative living space - even when he led a bohemian's life for almost two decades, in places other than Durga. In his attempt to experience it through the eye of an anthropologist' added with a tinge of nostalgia, Prakash makes Durga a subject, to fit into his pictorial surface.

The potential aspect of his works lies in his curiosity to experiment with two deviant, and arguably contrasting social structures of leftist blend with that of aristocracy. Towards this end he utilises two (of the many possible) represented personalities of Durga. Often he places two

sculpture-like hands emerging from below the picture surface, captivating the bust-sculpture of an unrecognisable personality. In such cases the artist seems to justify the logic of the power. On the contrary, the fallen cardboard man lying amidst the four walls of the fort is a clear indication of the well-set notion of the failure of such monarchy today. The artist poses himself as a typical democrat in this context. This is a pictorial play between the past and the present. A third position of commenting upon the power strategy of democracy itself, while in theory it was supposed to be powerful enough to castrate such powers, is rarely evident in these works.

Altogether, Prakash re-evaluates not a historic but the already set literary and cinematic representation of a historic place - Durga to be specific - It has also been the cultural space in which he grew up. Within a powerful tradition of landscape painting from Karnataka, he marks new boundaries while depending upon the old themes. But his very difference in representation itself redefines the theme. It is a specific location seen from various angles and through the memory of a changing artist that his dear place is made to serve as a proxy to the picture space he deals with. His final comments are sympathetic to both the contesters within this space: the power within and without democracy.

Times of India : 23.3.98 **H.A. Anil Kumar**

# THURIGA, A SEARCH

It has always been the same with art schools - at least all-over India. A realistic technique will always earn admiration from one's peers and of course, from one's teachers - that is, if they are just 'teachers' of art and not 'Creative Artists' themselves.

However, there are exceptions to every rule and some schools may have been producing nascent genius right from the first year of instruction (difficult to believe, that!!) Sadly, such is not the case with the Government College of Arts and Crafts, kumbhakonam, and their exhibition "Thuriga - A search through medium" put up at the Karnataka Chitrakala Parishath proves it. Here it is all academic and very little originality.



Life Study : Raj Kumar R.

Still, the students have time on their side and most of them display at least part of the artistic skills required for them to develop further as artists. What one sees at the Chitrakala Parishath exhibition are the regular water-colours, knife painting, oils, bronzes and repouse work.

Of the group, Rajkumar R, although veering towards the romantic and the cliched in his choice of models, seems to have the makings of a promising portraitist. He exploits the flow of watercolour and the white of the paper

to evoke the feeling of different textures - namely skin, hair, stained teeth, drapery etc.

Kamalesh Kumar's 'On a rainy day' reminds one of Donatello's 'Mary Magdalene'. The same, attenuated feeling of silent but agonised suffering seeps through in the deliberately rough and scaly feel of the sculpture. Kumar's keen sense of observation and fine stylization is apparent in the way he captures the dripping garments and headcovering of the two hapless labourers caught in the onslaught of the Indian monsoon. Especially, noteworthy is the way he was depicted their feet dragging against the force of the water. In the case of Ahmed Batcha's 'Rain Care', though the style is as old and common as the hills, there is no doubt of his mastery over the medium of water colour.

Deccan Herald : 6.4.98 **Veena Kotian Thimaiah**

# THE VEIL AS A SYMBOL

Tendering oneself altogether to an enterprise, not only comes with a certain pleasure but also presupposes a certain success. Archana Hande makes her own thing. She makes her own paper and her own metal plates and her own prints. Her exhibition titled "The Veil Shop" (Feb. 22-27) by the Gallerie Sumukha at the L'Atelier, Alliance Francaise, is an intimate attempt to authenticate the presence of the self in each creator's art. She might be talking of some commerce when she says veil shop, or titles her little prints "Samples". But it seems more a market site, a gathering, of similar behaviour and obligation. The 'veil', seen and unseen, is however the point. That something in common is realised, and sometimes not.

Some particular filigree on the design reminds one of the veil as a symbol of ethos, that which could baptise a certain part of the human race on a certain part of the earth as integral to culture. Implied however, is Archana's understanding of the instinct of the first man who conceived the veil as one effective instrument of proscription of personal liberty, originally intending to be protection.

But what is more evident, is that, the veil essentially works like a valve, a unidirectional visual circuit. One who wears it sees, but is not seen. Perhaps a mystery, a conserved privacy - something that might seem compensation enough to accept what is ordained and in that sense perpetuate the legendary submission. This besides, suggests some two staring eyes, each of one's own movement being always monitored.

Archana besides, most importantly, sees in herself no exception. She confirms, she wears the veil too. Her three great lengths of polythene speak, through their transparence, for the veil. This virtual veneer, a "collective unconscious", is a statement of the sublety of the imperatives



Archana Hande's installation - Mixed Media - 1999

of civilisation. Something apathetically accepted, ignored and made safe from questioning.

As rather glaringly evident by her "the other side of the grass is always green", the arbitrary transit of vision apart, the paper print is characteristic of classical architecture. A common building device that could replace the veil is the instrinsically worked blunt walls installed at a distance before the wall, from behind which, perhaps, the Moghul queens spoke.

Archana uses parchment colours. That is essentially antique, native pigments of green (sombre viridian and turquoise), a rundown maroon and brown ochre. They create spheres of something inseparably indigenous.

Hindu : 17-2-99 **Chandranandinee Tushar**

# IN OUR OWN WORLD

"Each artist possesses a weapon that allows him to intimidate tradition". Contemporary digital artist Jeremy Gardiner uses this quotation from Fernand Leger to provide a key to his work. "Nature Morte" (1990). This work is a large print that balances a number of separate images to create the still life picture of a cut fruit, some berries in a bowl, a glass half filled with wine and a knife - all on a table top. The work, a combination of both laser printed graphics of the Macintosh Computer and the high-resolution photographic image-processing capability of the Quantel Piantbox, finally emerged as a printed lithograph. Here, the artist works within the framework of conventional painting using electronic brushes and colour palettes. The popularity of this type of software is in part based on the integration of traditional metaphor of painting.

Although, more and more artists have become involved in producing computer-generated works they are initially put off by the lack of a visually mature language. Purnachandra Tejasvi's digital paintings in his exhibition "Images of Mudigere" at the Images Art Gallery (June 2-15) have no such deficiency of artistic diction. In fact, his paintings precipitate a superior quality that is an extract of the unquestionable naturalness of photography refined by the artist's creative sprint. Tejasvi's creativity excels in two ways : in his creative contemplation as a photographer and in his keen expertise at synthesising art in technology. However, it is the second one that matters more in his exhibition. In their original form as photographs the pictures provided the psychological or emotional raw material - the place and the people. The actual value was added when they

were digitally superscribed. It is this artistic intervention that makes the artist sovereign, irrespective of magnetic film roles or silicon chips.

## Romanticism and humour

Doubtless, the paintings are reminiscent of "Karvalho", the artist's novel that reverberates through romantic familiarity, of likeness and existence. This is a small world and these are its grassroots to which the "I" belongs - somewhere somehow: Where the air in fresh and light clouds touch your head. There is the same rain and sun and obsession here too. But somehow this seems "my own". It is this belongingness that the picture reveal as they, at the same time, challenge the boredom and drab of their own bullock cart-driven country life. It is the people - they are not madeup. They don't care to brush or bathe like Mandanna in "Karvalho". Yet they are romantics like him, who spies for rare plants and insects and fresh honey deep in the woods and enchants the scientist Karvalho. Who believes Mandanna is a genius. The forests, the plantations and the "haruva halli' (flying lizard) in "Karvalho" - a delight of a very rare variety. The paintings "A brief moment of laughter", "Kutty's fishery", "Cottage and the industry", "Tyres behind the tired", "Grazing under watch", "Sairam and the wholesale merchant", all imaging the people, precisely represent the romantic undertaking that visualises something extraordinary, something intriguing in the quotidian and seemingly ordinary.

Among these some are a humorous treat. "Boramma and her assets" which closes in on a young lad with a long twig in hand, with Boramma, a little behind carrying his younger brother. The two of them pose for the photograph, pampered by attention and curious. "Bicycle and the beverage" is about a tender coconut pedlar apparently with a good daily turnover. "A chair amidst the mobile market" is a digital sketch that reiterates Tejasvi's penchant for utrodden wit and geniality. The pictures filming Charmudi ranges substantiate his prenatal relationship with romanticism. Nevertheless, one painting "Storm" stands apart seeming to have nothing to do with the indigenous fabric in which the rest of the paintings live.

The technique too is different from the rest with good relief work and spacing, typically three-dimensional and bright tints of lizard green which at once bring to mind David Tindle's classic tempera work "Gardens-Clipston '83". This, in fact, seems to be algorithmic art that is more rule-based concentrating on structure, where this structure is knowledge -knowledge about the process of making art, rather than about the art object itself.

The composition here, looks very English or Western say, that of the temperate grasslands.

In terms of technique the artist's knowledge of the "dampness of paper" the computer "brush" the varying amounts of "water and paint" the "dry brush effect" and most of all of the pressure sensitivity of the electronic brush and pencil seems to be indisputable. Also his discretion regarding the use of the two pigment types - water and oil as and how the subject of the picture requires emulates the liveliness of the art objects.

"Images of Mudigere" are montages of a quiet town in all abundance of life and open to change. Tejasvi's art visits multiple planes of reality while working in more than one medium.

Hindu : 12-6-99 **Chandranandinee Tushar**

## A NEW EMERGENCE

A Young artist like Ravi Shah has emerged from academic circles to the art sense. He has been motivated to work in studios in an informal set up to practice his skill. A new awareness of the self emerges from the infantile dependence of the art collage, rejecting and discovering from modes of established representations. From the premise of looking at this young artist, he is impatient and energetic, belongs to a new generation that defines imagery which is conceived from the growing electic atmosphere, charted out by the contemporary developments and international trends seen in the visual arts.

Ravi has exhibited some of his drawings at the Images Art Gallery, from his stint in working at the Academy of Fine Arts, Warsaw, Poland. They are a selection of images from the academic exercise done by art students in a life study class using live models. Fortunately they move beyond academic exercise, the young artist curiously captures the atmosphere of the studio with props and models, depicting spot lights, heaters, chairs, easels and drawing boards. He playfully rearranges these images to create his own compositions from different angles and manages to capture the desolate and lonely feelings of old men and women with compassion.

He adapts a spontaneous, carefree, squiggles by the use of the brush creating rough tones and volumes of bodies, this attitude moves beyond the conventional methods of delineation and depicting chiaroscuro. He is more interested in recreating these models in three dimension which seems to be his passion, these are visible in the attempts in carrying in wood which have not been on display, but show his sensibility and direction.

Some self portraits show an awareness of the self, the growing teenager noticing the changes in his body, a certain self consciousness of one's sexuality. Some sketches of younger models are depicted in classical poses with contrapposto, or relaxing with ease.

This body of work shows honest sincerity of the artist and needs to be encouraged. One expects him to focus his abilities to arrive at a body of work that can establish his individuality in the days to come. The show is on till June 5.

Deccan Herald : 31.5.99 Suresh Jayaram

# LIMITED PALETTE OF DILETTANTE

N S Nadan's show at Javacity revealed a palette limited with his warm colours staring at us through his square canvases. His symbolism is cliched, stagnant, boring, limited, pseudo-ideological, presumptuous, loose, shaky and pretentious. Nadan would be an artist if he knew how to paint. But now he is a sophisticated dilettante who wants to make his mark as a painter. Though we wish him all the luck, he has to work hard and go further in his handling of paint, composition, subject matter and bring in a certain definition to himself as an artist (if he wants to be identified as an artist at all in the first place). But he should not be dismissed in haste. Perhaps accidentally, certain elements of good pictorial grammar come through, asserting the importance of the language that he is desperately trying to grasp. For Nadan, though subconsciously, has achieved what to most artists is a desperate conundrum - the defining of the pictorial plane. In certain con-jobs of painting, the pictorial plane is not emphasized. Stated simply, the painter would want the reader to realise that the canvas is round. This conniving, one would find nineteen times to a dozen in thirdrate illustrators. But the artist in question (no pun intended) has despite himself known better. He meticulously builds up the background with luminescent strokes of browns and establishes a paradigm for the forefront to play up.



Painting by Nadhan

Another saving grace is the element in his compositions, which is, I presume, merely coincidental. His tantric symbols are centrally placed. This has been the significance of all the compositions of the western painting of the middle ages. Perhaps equally ignorant of compositional values as the craftsmen of the mediaeval times, Nadan has brought in centrality to his compositions. We invariably find centrality in all the sacred images of Christ in the mediaeval times. (Now recall our own omnipresent Ganeshas, Lakshmis, Saraswatis, Venkateshwaras, Vishnus, Brahmas et al even in contemporary times.)

His draftsmanship though, is immature, amateurish, raw, careless, mushy, unprofessional. But the techniques which he uses to get the clear linearity in the background by drawing with the back end of the brush while the paint is still wet, is eye-catching. Perhaps it is only eye-catching; as all that is eye-catching more or less stays only for a moment. Still, this difference in demonstration, if developed, could take him places, or at least some place where he might be able to demonstrate this simple but useful technique. All in all, the dilettante has to work hard to refine the quality of all the aspects of his hobbyhorse. If he is as meticulous about self-development as he is with his backgrounds, he might be able to make a significant mark on the canvas of his profession.

Deccan Herald : 4.8.99 **G. Raghav**

# EXPOSURE TO ECLECTIC TRENDS

The show of Sandeep Bangera and Vijay Sarathy at Jalsa (Cunningham Rd) is a sincere and interesting exhibition.



Sandeep Bangera's Graphic Prints - 1999

Sandeep the sculptor and Vijay the printmaker graduated from College of Fine Arts Chitrakala Parishat, and later went on to MS University Baroda for their postgraduation. This decision to move to Baroda has decisively charted the course of their artistic career and has consciously exposed them to electic trends. Moving from local, academic environment they have managed to explore technical and visual possibilities. Sandeep's drawing skills have evolved from illustrative quality as seen in his self-portrait. He

moves to adopt distortion and caricature from popular comic books to speak about the sacred and the profane in one breadth. Intricate folk motifs mingle with his comic-tragic characters. "Most of the characters are my friends and people I know", says the artist. His world explores human evolution in all its complexity - humour mingles with pain, organic nature marries urban clutter and the decorative is juxtaposed with the grotesque in happy union. His three dimensional niches continue their preoccupation and display his excellent craftsmanship in handling of the material.

Vijay's recent series are a marked departure from his early figurative works done during his degree course. These works collectively explore the possibilities of catching and the processes of 'sugar lift' and 'aqua'. His world is aquatic, inhabited with phallic fish forms, plant life and the dynamic flux seen in forms that are in motion.

Vijay captures the dark, mysterious underworld with spontaneity. The show, on till Oct 7, will decide their career.

Deccan Herald : 4.8.99 **Suresh Jayram**

## CORSET SKIN

Surekha's earlier works on paper related to this utterly feminine experience of wearing clothes impregnated with a physically as well as socially determined condition. The photographs recently on show at the Chitrakala Parishath look at the phenomenon from the opposite angle to arrive at similar and further enhanced conclusions-evocations. Being an aesthetic documentation of Surekha's show in Switzerland, the prints focus on fragments of the performing woman's body which is probed in a relationship to clothes, the properties of the later having become intensified by the fact





Surekha's Artwork - 1999
Thread on Nepali Paper and Photography

that they are made of transformed paper. This time too the female predicament in uncovered in its emotive-cum-material sensitivity. The revelatory interaction between the body bearing marks of the woman's state and the clothes is indicated first by the many, ever slightly changing visual variants, the sequencing of which stresses the sense of putting them on and feeling their physicality on one's skin. Surekha by skilfully and finely picking up different accents is able to conjure a range of mutually reactive connections. She achieves fair subtlety with force confronting as well as almost blending certain similar traits of the body with the art-handled paper serving as another bridge in the context of craft and female handiwork. And so, for instance, the skinny frame is vulnerable yet strong and enduring, blemished yet graceful, nearly ascetic yet sensuous, even sensual, as if bleeding sometimes, perhaps violated, yet firm and quietly assertive. The artist creates associations with the western corset while remaining simultaneously Indian in her sensibility throughout. The body focus of the exhibition found another channel through the sparing but lucid arrangement of images which suggests its presence invarious positions and regions of the surrounding interior space. Particularly fortunate are metaphoric tactile bond between hair and thread, blood and red pigment, veins or nerves and earth ducts in rows of running stitch as well as though mapped presence on the ground and in the air. Carnal pleasure, even fine self-attunement, and physical pain, textiles as imposing a regimen on the body and as protecting it.

Hindu : 17-2-99 Marta Jakimowitz

# VITAL AGITATION

The recent exhibition of K G Subramanyan's paintings at Sakshi may have been a shadow of the retrospective which travelled to the biggest cities. Nevertheless, apart from the few and somewhat chance selection from more complex works typical to the masters qeuvre, the numerous 'poluptych' of loosely arranged, yet inherently connected, heads allowed for a thorough and multi-aspected contact with one kind of his work. Such contact was all the more reqarding in its accessibility that the relatively simple images encouraged in the spectator an intimate delectation. This very apparent simplicity yet served well to reveal succinctly the actual profundity and many layered fitness of Subramanyan's vision.

The heads painted with a constant size and general framework in mind, from part of a fairly arbitrarily interchangeable series. This character of it contributes further to the overall effect of potraying not individual but universally human behaviour. Occasionally one may almost get the impression of a concrete person but exaggerates and transposed or at least almost caricatural.

Still, the languidly tense, terse paintings capture the universalised essence of people's gesticulations, expressions, moods and stirred vitality, their robust, exuberant sensuality immersed in the organic and animal world prevailing. The lightness and humour that inform them as well as consists easily with the simultaneous passion, certain mysteriousness and gravity.

The sense of ever fluid human expressiveness enhances through the motif of the mask, the latter either grown inseparately with the face, as if superimposed

Deccan Herald : 1.11.99

Marta Jakimowitz

## STUFFED WITH THEIR OWN SOUL?

Babu Eshwar Prasad's paintings **'Still Lifes of Emptiness' at C.K.R. Gallery**'contain still life objects but are not still lives by themselves. This is a subtle deviation. When something, say objects, are contained, they can easily be either retained or discarded. In his paintings, due to the way in which they are held together, the objects can be detected, dislocated, shifted to another picture (like the German film director Kluga does in his films) from the picture plane, speaking symbolically.

It is like this: though there are obvious elements of landscape as well as still life, like the recurring boats containing a pyramidical structure, conch



Babu Eshwar's Painting Acrylic Medium - 1999

